ವಿಷಯಾನುಕ್ರಮಣಿಕೆ

ಅಧ್ಯಾತ್ಮಗ್ರಂಥಾವಳಿ

# ಕೇನೋಪನ್ಯಾಸಮಂಜರಿ

ಬರೆದವರು :

ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೬೨

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ,

ಹೊಳೆನರಸೀಪುರ.

೧೯೯೫

# ಮುನ್ನುಡಿ

ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ಅಧ್ಯಾತ್ಮ ವಿದ್ಯೆಯ ಭಂಡಾರವಾಗಿರುವ ಉಪನಿಷತ್ತುಗಳಿಗೆ ಶ್ರೀಶಂಕರಭಗವತ್ಪಾದರು ರಚಿಸಿರುವ ಭಾಷ್ಯಗಳನ್ನೆಲ್ಲ ಕನ್ನಡಿಸಿ ಪ್ರಕಟಿಸಿದಮೇಲೂ ತೃಪ್ತರಾಗದೆ ಜಿಜ್ಞಾಸುಗಳಿಗೆ ಶಾಸ್ತ್ರಾರ್ಥ, ವಾದವಿವಾದಗಳು, ಖಂಡನಮಂಡನಗಳ ಗಡಿಬಿಡಿಯಿಲ್ಲದೆ ತಿಳಿಯಾದ ಭಾಷೆಯಲ್ಲಿಯೇ ಉಪನಿಷತ್ತುಗಳ ಸಾರವನ್ನು ತಿಳಿಯಿಸಬೇಕೆಂದು ಸಂಕಲ್ಪಿಸಿ ಕೆಲವು ಉಪನಿಷತ್ತುಗಳಿಗೆ "ಮಂಜರಿ" ಎಂಬ ಹೆಸರಿನ ವಿವರಣ ರೂಪವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಇಂಥವುಗಳಲ್ಲಿ ಈಗ ಪ್ರಕಟವಾಗುತ್ತಿರುವ 'ಕೇನೋಪನ್ಯಾಸಮಂಜರಿ'ಯೂ ಒಂದಾಗಿದೆ.

ಜಿಜ್ಞಾಸುಗಳು ಶ್ರೀಶಂಕರಭಾಷ್ಯಗಳನ್ನು ಓದುವ ಮೊದಲು, ಅಥವಾ ಅಧ್ಯಯನಮಾಡಿದಮೇಲೂ ಆಯಾ ಉಪನಿಷತ್ತುಗಳ ತಾತ್ಪರ್ಯವನ್ನು ಗ್ರಹಿಸಲು ಈ ಮಂಜರಿಗಳು ಸಹಾಯಕವಾಗಿವೆ. ಪ್ರವಚನ-ಉಪನ್ಯಾಸಗಳನ್ನು ಮಾಡುವಂಥ ವಿದ್ವಾಂಸರಿಗೂ ಇವು ಮಾರ್ಗದರ್ಶನಮಾಡುತ್ತವೆ. ಮುಖ್ಯವಾಗಿ ಕನ್ನಡಭಾಷೆಯಲ್ಲಿ ಅಧ್ಯಾತ್ಮವಿದ್ಯೆಯ ಪ್ರಚಾರವನ್ನು ಕೈಗೊಳ್ಳಲು ಈ ಬಗೆಯ ಗ್ರಂಥಗಳು ಅತ್ಯುಪಯುಕ್ತವಾಗಿವೆ-ಎಂದರೆ ಅತಿಶಯೋಕ್ತಿಯೆನಿಸಲಾರದು. ಮೂರನೆಯ ಬಾರಿಗೆ ಈಗ ಈ ಗ್ರಂಥವನ್ನು ಪುನರ್ಮುದ್ರಿಸಿ ವಾಚಕರಿಗೆ ಸಮರ್ಪಿಸಲಾಗಿದೆ. ಭಾರತದೇಶದ ಬೇರೆಯ ಪ್ರಾಂತೀಯಭಾಷೆಗಳಿಗೂ ಈ ಗ್ರಂಥವು ಅನುವಾದಿತವಾಗಿ ಪ್ರಕಟವಾಗಬೇಕೆಂದು ನಮ್ಮ ಅಭಿಲಾಷೆಯಿದೆ. ಆಸಕ್ತರು ಕಾರ್ಯಾಲಯಕ್ಕೆ ಬರೆದು ಅನುಮತಿಯನ್ನು ಪಡೆಯಬಹುದು.

ಈ ಗ್ರಂಥದ ಪ್ರಕಟನೆಗೆ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :-

| | | |
|---|---|---|
| ೧. | ಶ್ರೀ ಎಸ್. ಪಿ. ಚಂದ್ರಶೆಟ್ಟರು, ಕಂಟ್ರಾಕ್ಟರ್, ಮೈಸೂರು. | ರೂ. ೧೦೦೦-೦೦ |
| ೨. | ಶ್ರೀ ಪಿ. ಜಯವಾಸುದೇವಶಾಸ್ತ್ರಿಗಳು, ರಿ\|\| ಪ್ರೊಫೆಸರ್, ಹರಿಹರ. | ರೂ. ೪೦೦-೦೦ |
| | ಒಟ್ಟು ರೂ. | ೧,೪೦೦-೦೦ |

ವಾಚಕರು ಎಂದಿನಂತೆ ಈ ಗ್ರಂಥವನ್ನೂ ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಲಾಗಿದೆ.

ಇತಿ- ಸಜ್ಜನವಿಧೇಯ,

ಹೊಳೆನರಸೀಪುರ. ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ತಾ|| 1-2-1995 ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

# - ವಿಷಯಾನುಕ್ರಮಣಿಕೆ -

ಓಮ್

# ಕೇನೋಪನ್ಯಾಸಮಂಜರಿ

## ೧. ಉಪನಿಷತ್ತಿನ ವಿಷಯ

ಕೇನೇಷಿತಂ ಪತತಿ ಪ್ರೇಷಿತಂ ಮನಃ
ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದನ್ತಿ
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ ೧ ॥

೧. "ಯಾವನ ಇಚ್ಛಾಮಾತ್ರದಿಂದ ಕಟ್ಟುಬಿದ್ದು ಮನಸ್ಸು ತನ್ನ ವಿಷಯದಲ್ಲಿ ಬೀಳುತ್ತದೆ? ಪ್ರಥಮಪ್ರಾಣವು ಯಾರ ಕಟ್ಟಳೆಯಿಂದ ತನ್ನ ವ್ಯಾಪಾರವನ್ನು ಮಾಡುವದಕ್ಕೆ ಹೋಗುತ್ತದೆ? ಯಾರ ಇಚ್ಛೆಯಿಂದ ಈ ನುಡಿಯೆಂಬುದನ್ನು ಇನ್ನೂ ಆಡುತ್ತಿರುವರು? ಚಕ್ಷು ರಿಂದ್ರಿಯವನ್ನೂ ಶ್ರೋತ್ರೇಂದ್ರಿಯವನ್ನೂ ಯಾವ ದೇವನು ಕೆಲಸದಲ್ಲಿ ನಿಲ್ಲಿಸುತ್ತಿರುವನು?"

ಇದು ಸಾಮವೇದಕ್ಕೆ ಸೇರಿದ ತಲವಕಾರಶಾಖೆಯ ಉಪನಿಷತ್ತಿನ ಮೊದಲನೆಯ ಮಂತ್ರವು. 'ಕೇನ' ಎಂಬ ಮಾತಿನಿಂದ ಮೊದಲಾಗುವದರಿಂದ ಈ ಉಪನಿಷತ್ತಿಗೆ ವೈದಿಕರು 'ಕೇನೋಪನಿಷತ್ತು' ಎಂದು ಹೆಸರಿಟ್ಟುಕೊಂಡಿದ್ದಾರೆ. ಆಕಾರದಲ್ಲಿ ಸಣ್ಣದಾದರೂ ಇದು ಅತ್ಯಂತ ಉಚ್ಚತರವಾದ ವಿಷಯವಿಚಾರಗಳಿಂದ ತುಂಬಿರುತ್ತದೆ. ಉಪನಿಷತ್ತಿನ ಮುಖ್ಯವಿಷಯವನ್ನು ಇಲ್ಲಿ ಸೂತ್ರರೂಪವಾದ ಒಂದು ಪ್ರಶ್ನೆಯಿಂದ ತೋರಿಸಿರುತ್ತದೆ.

ಪ್ರಪಂಚವನ್ನು ಆಧಿಭೌತಿಕವೆಂದೂ ಆಧ್ಯಾತ್ಮಿಕವೆಂದೂ ಎರಡು ದೊಡ್ಡ ಭಾಗಗಳಾಗಿ ವಿಂಗಡಿಸಬಹುದು. ಆಧಿಭೌತಿಕವೆಂದರೆ ಪಂಚಭೂತಗಳ ರೂಪದಿಂದ ನಮ್ಮ ಹೊರಗೆ ಕಾಣುತ್ತಿರುವ ಪ್ರಪಂಚವು. ಆಧ್ಯಾತ್ಮಿಕವೆಂದರೆ ನಮ್ಮೊಳಗೆ ಇದ್ದುಕೊಂಡು 'ನಾನು', 'ನಾನು'– ಎಂದು ನಾವೆಲ್ಲರೂ ಅಭಿಮಾನಪಡುವದಕ್ಕೆ ಆಸ್ಪದವಾಗಿರುವ ಪ್ರಪಂಚವು. ಹೊರಗಿನ ಪ್ರಪಂಚವು ಸ್ಥೂಲರೂಪದಿಂದ ನಮ್ಮೆಲ್ಲರಿಗೂ ಪರಿಚಿತವಾಗಿರುವದು, ಇದರ ವಿವರವನ್ನು ಭೌತಿಕಶಾಸ್ತ್ರಗಳು ಬಗೆಬಗೆಯಾಗಿ ಹಂಚಿಕೊಂಡು ತಿಳಿಸುವದಕ್ಕೆ ಹೊರಟಿರುತ್ತವೆ. ಇದರ ರಚನೆಗೂ ಸೌಂದರ್ಯಕ್ಕೂ ಬೆರಗಾಗಿ ಜೀವರು ಇದರಲ್ಲಿ ಮಗ್ನರಾಗಿರುತ್ತಾರೆ; ಇದನ್ನು ಹೆಚ್ಚುಹೆಚ್ಚಾಗಿ ತಮ್ಮ ವಶಕ್ಕೆ ತೆಗೆದುಕೊಂಡು ಸುಖಪಡಬೇಕೆಂದು ಹವಣಿಸುತ್ತಲೂ ಇರುತ್ತಾರೆ. ಆದರೆ ಇದರಷ್ಟೇ ವಿಶಾಲವಾಗಿ

ಇದರಷ್ಟೇ ಅಥವಾ ಇದಕ್ಕಿಂತಲೂ ಹೆಚ್ಚಾಗಿ ವಿಚಿತ್ರತರವಾಗಿ, ಇದಕ್ಕಿಂತಲೂ ನಮಗೆ ಹತ್ತಿರವಾಗಿ, ಒಂದು ಆಧ್ಯಾತ್ಮಿಕಪ್ರಪಂಚವು ಇರುವದೆಂಬುದು ನಮ್ಮಲ್ಲನೇಕರಿಗೆ ತಿಳಿದಿರುವದಿಲ್ಲ ; ಅಥವಾ ಕೆಲವರು ತಿಳಿದಿದ್ದರೂ ಅವನ್ನೂ ಅಧಿಭೌತಿಕದೃಷ್ಟಿಯಿಂದ ನೋಡಿ ಅವರ ವಿಷಯವಾಗಿ ಶಾರೀರಶಾಸ್ತ್ರಮಾನಸಶಾಸ್ತ್ರಗಳು ತಿಳಿಸಿಕೊಡುವಷ್ಟು ವಿಷಯವನ್ನು ಮಾತ್ರ ಸಂಗ್ರಹಿಸಿರುವರೇ ಹೊರತು ಅವನ್ನು ತತ್ತ್ವದೃಷ್ಟಿಯಿಂದ ಪರೀಕ್ಷಿಸುವ ಗೋಜಿಗೆ ಅನೇಕರು ಹೋಗಿರುವದಿಲ್ಲವೆಂದರೆ ತಪ್ಪಾಗದು.

ಉದಾಹರಣೆಗೆ ನೋಡಿರಿ. ನಮ್ಮ ಮನಸ್ಸು ವಿಷಯಗಳನ್ನು ಗ್ರಹಿಸುವದೆಂಬುದು ನಮ್ಮೆಲ್ಲರಿಗೂ ತಿಳಿದಿರುವ ವಿಷಯವಾಗಿದೆ. ಆದರೆ ಅದು ಮಾಡುವ ಕಾರ್ಯವನ್ನು ನಾವೆಲ್ಲರೂ ಬಲ್ಲೆವಾದರೂ ಅದರ ಸ್ವರೂಪವೇನೆಂಬುದು ನಮಗೆ ಯಾರಿಗೂ ತಿಳಿಯುವಹಾಗಿಲ್ಲ. ಹೊರಗೆ ಎಷ್ಟು ದೂರದಲ್ಲಿ, ಎಷ್ಟು ಹಿಂದಿನ ಅಥವಾ ಎಷ್ಟು ಮುಂದಿನ ಕಾಲದಲ್ಲಿ, ತೋರಿಕೊಳ್ಳಬಹುದಾದ ವಿಷಯವಿದ್ದರೂ ಮನಸ್ಸು ಒಂದರೆಕ್ಷಣದಲ್ಲಿ ಅದನ್ನು ತನಗೆ ವಿಷಯವಾಗಿ ಮಾಡಿಕೊಂಡುಬಿಡುತ್ತದೆಯಲ್ಲ! ಎಂಥ ಅದ್ಭುತಶಕ್ತಿಯಿದು! ಹೊರಗಿನ ವಿಷಯಗಳಿಲ್ಲದಿದ್ದರೂ ಅದು ತಾನೇ ಬೇಕಾದ ವಿಷಯಗಳನ್ನು ನೆನಪಿಗೆ ತಂದುಕೊಂಡುಬಿಡುತ್ತದೆ, ಅಥವಾ ಕಲ್ಪಿಸಿಕೊಂಡುಬಿಡುತ್ತದೆ. ಎಂಥ ವಿಚಿತ್ರಶಕ್ತಿಯಿದು! ಮಾನವನ ಮನಸ್ಸಿನ ಶಕ್ತಿಯು ಇಂತಿಷ್ಟೇ– ಎಂದು ಯಾರೊಬ್ಬರೂ ಇದುವರೆಗೆ ಅಳೆದಿರುವದಿಲ್ಲ. ಅತ್ಯಂತ ಕೀಳುತರವಾದ ಬುದ್ಧಿಯಿಂದ ಹಿಡಿದು ಬೃಹಸ್ಪತಿಯ ಬುದ್ಧಿಯವರೆಗೂ ಮನುಷ್ಯನಲ್ಲಿ ಹೊರಸೂಸುತ್ತಿರುವದು ನಮ್ಮೆಲ್ಲರಿಗೂ ತಿಳಿದಿರುವ ವಿಷಯವು. ಎಂಥೆಂಥ ಗಹನವಾದ ತತ್ತ್ವಗಳನ್ನು ಮಾನವನ ಮನಸ್ಸು ಒಳಹೊಕ್ಕು ವಿಂಗಡಿಸಿ ಅರಿತುಕೊಂಡು ಸ್ಪಷ್ಟಪಡಿಸಿಬಿಡುತ್ತದೆ! ಪ್ರಪಂಚದಲ್ಲಿರುವ ಎಂಥೆಂಥ ವಿಚಿತ್ರವಸ್ತುಧರ್ಮಗಳನ್ನು ಕಂಡುಹಿಡಿಯುತ್ತದೆ! ತಾನೇ ಹೊಸಹೊಸದಾಗಿ ಎಂಥೆಂಥ ಕಲ್ಪನೆಗಳನ್ನು ಮಾಡಿ ವಿನೋದಕ್ಕೂ ವ್ಯವಹಾರದ ಉಪಯೋಗಕ್ಕೂ ಅನುಕೂಲವಾದ ಎಂಥೆಂಥ ಅದ್ಭುತ ಉಪಕರಣಗಳನ್ನು ಇದು ಕಲ್ಪಿಸುತ್ತದೆ! ಈ ಮನಸ್ಸಿನ ಇಂಥ ಅದ್ಭುತಶಕ್ತಿಗೆ ಮೂಲವು ಯಾವದು? ಇಂಥ ಮಹಾಭೂತವನ್ನು ಸೃಷ್ಟಿಸಿ ಮಹಾಯಂತ್ರದಂತೆ ಎಡೆಬಿಡದೆ ಕೆಲಸಮಾಡುವ ಹಾಗೆ ಏರ್ಪಡಿಸಿರುವವರು ಯಾರು? ಇದು ತಿಳಿದುಕೊಳ್ಳತಕ್ಕ ವಿಷಯವಲ್ಲವೆ?

ಮನುಷ್ಯನಲ್ಲಿರುವ ಜ್ಞಾನಶಕ್ತಿರೂಪವಾದ ಮನಸ್ಸಿನಷ್ಟೇ ವಿಚಿತ್ರವಾದದ್ದು ಕ್ರಿಯಾಶಕ್ತಿಯಿಂದೊಡಗೂಡಿರುವ ಪ್ರಾಣವು. ಮಾನವನಲ್ಲಿರುವ ತಿಳಿವಳಿಕೆಯಷ್ಟೇ ಅವನಲ್ಲಿರುವ ಚಲನವಲನಗಳೂ ಆಶ್ಚರ್ಯಕರವಾಗಿರುತ್ತವೆ. ಶರೀರದ ಒಂದೊಂದು ಭಾಗವೂ ಅಲುಗಾಡುವಂತೆ ಮಾಂಸಖಂಡಗಳು ಕೆಲಸಮಾಡುತ್ತಿರುತ್ತವೆ; ಆ ಮಾಂಸಖಂಡಗಳಿಗೆ ತಗಲಿಕೊಂಡು ಅವುಗಳ ಸಂಕೋಚವಿಕಾಸಕ್ಕೆ

ಕಾರಣವಾಗಿರುವ ನರಗಳು ಕೆಲಸಮಾಡುತ್ತಿರುತ್ತವೆ; ಆ ನರಗಳಿಗೆ ಮೂಲವಾಗಿ ಅವುಗಳಿಗೆ ಕ್ರಿಯಾಶಕ್ತಿವಾಹನಕಾರ್ಯವನ್ನು ಒದಗಿಸುತ್ತಾ ಮೆದುಳು ಕೆಲಸ ಮಾಡುತ್ತಿರುತ್ತದೆ ಆ ಮೆದುಳಿನ ಭಾಗಕ್ಕೆ ರಕ್ತವನ್ನು ಒದಗಿಸುತ್ತಿರುವ ರಕ್ತನಾಡಿಗಳು ರಕ್ತವನ್ನು ಮುಂದೊಬ್ಬುವ ಕೆಲಸವನ್ನು ಮಾಡುತ್ತಿರುತ್ತವೆ ; ಆ ನಾಡಿಗಳಿಗೆ ರಕ್ತವನ್ನು ತುಂಬುವದಕ್ಕಾಗಿ ಏರ್ಪಟ್ಟಿರುವ ಪಂಪಿನ ಹಾಗೆ ಹೃದಯವು ಸಂಕೋಚವಿಕಾಸರೂಪವಾದ ಕೆಲಸವನ್ನು ಬಿಡುವಿಲ್ಲದೆ ಮಾಡುತ್ತಲೇ ಇರುತ್ತದೆ; ಹೃದಯಕ್ಕೆ ತಮ್ಮ ತಮ್ಮ ಕಡೆಯಲ್ಲಿರುವ ರಕ್ತವನ್ನು ಸುರಿಯು ತ್ತಿರುವ ಚರಂಡಿಗಳಂತಿರುವ ನಾಡಿಗಳು ಒಂದು ಕಡೆಯಲ್ಲಿ ಕೆಲಸಮಾಡುತ್ತಿರು ತ್ತವೆ; ಅದೇ ಹೃದಯದ ರಕ್ತವು ಶುದ್ಧವಾಗಿ ಮುಂದೆ ಸಾಗುವಂತೆ ಹೊಸ ಶುದ್ಧವಾಯುವನ್ನು ಒಳಕ್ಕೆ ತರುತ್ತಲೂ ಕಲ್ಮಷವಾದ ವಾಯುವನ್ನು ಹೊರಕ್ಕೆ ಕಳುಹಿಸುತ್ತಲೂ ಶ್ವಾಸಕೋಶವು ಇನ್ನೊಂದುಕಡೆಯಲ್ಲಿ ಕೆಲಸಮಾಡುತ್ತಿರುತ್ತದೆ. ಹೀಗೆ ದೇಹದಲ್ಲೆಲ್ಲ ತಡೆಬಿಡೆಯಿಲ್ಲದೆ ನಡೆಯುತ್ತಿರುವ ಕ್ರಿಯೆಗೆಲ್ಲ ಮೂಲ ವಾಗಿರುವ ಪ್ರಾಣದ ಸ್ವರೂಪವು ಏನು ? ಆ ಪ್ರಾಣವು ಯಾರ ಕಟ್ಟಳೆಯಂತೆ ತನ್ನ ಕೆಲಸವನ್ನು ಮಾಡುತ್ತಿರುವದು ?

ಇನ್ನೊಂದು ವಿಷಯ : ಹೊರಗಿನ ಪ್ರಪಂಚದಲ್ಲಿ ಕಾಣಬರುವ ವಿಷಯ ಗಳ ಅರಿವನ್ನು ಹಿಡಿದು ಒಳಕ್ಕೆ ನಮಗೆ ವರದಿಯನ್ನು ಕೊಡುತ್ತಿರುವ, ಮತ್ತು ಒಳಗಿನ ಸಂಕಲ್ಪದಂತೆ ಹೊರಗೆ ಕೆಲಸವು ಜರುಗುವಂತೆ ಏರ್ಪಡಿಸುತ್ತಿರುವ, ಇಂದ್ರಿಯಗಳ ಸ್ವರೂಪವೇನು ? ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ– ಇವುಗಳ ಹೊರರೂಪವನ್ನು ನೋಡಿದರೆ ಎಲ್ಲವೂ ಚರ್ಮವೇ ; ಆದರೆ ಒಂದೇ ಚರ್ಮಕ್ಕೆ ಬೇರೆಬೇರೆ ಸ್ಥಾನಗಳಲ್ಲಿ ಬೇರೆಬೇರೆಯ ಕಾರ್ಯವನ್ನು ನೆರವೇರಿಸುವ ಶಕ್ತಿಯು ಎಲ್ಲಿಂದ ಬಂದಿರುತ್ತದೆ ? ಕಣ್ಣಿಗೆ ರೂಪ, ಕಿವಿಗೆ ಸದ್ದು, ಮೂಗಿಗೆ ಕಂಪು, ನಾಲಗೆಗೆ ಸವಿ, ಚರ್ಮಕ್ಕೆ ಸೋಕು– ಇವುಗಳು ತಿಳಿಯುವದು ಹೇಗೆ ? ಇವುಗಳು ತಮ್ಮ ತಮ್ಮ ಕೆಲಸವನ್ನು ಮಾಡುವಂತೆ ಮಾಡುವವರು ಯಾರು ? ಇವುಗಳ ಹಿಂದೆ ಇಂದ್ರಿಯಗಳಿರುವವೆಂದರೂ ಅವುಗಳು ನಿಯತವಾಗಿ ಕೆಲಸ ಮಾಡಿ ಆಯಾ ವಿಷಯವನ್ನು ಅರಿಯುವಂತೆ ಮಾಡಿರುವವರು ಯಾರು ? ಎಂಥ ಅದ್ಭುತಲೀಲೆಯಿದು !

ಜ್ಞಾನೇಂದ್ರಿಯಗಳಾದ ಚಕ್ಷುರಾದಿಗಳಂತೆಯೇ ಕರ್ಮೇಂದ್ರಿಯಗಳನ್ನೂ ವಿಚಾರಮಾಡತಕ್ಕದ್ದಿರುವದು. ಎಲ್ಲಿಯೋ ಸಂಕಲ್ಪವು ಹುಟ್ಟಿದರೆ ಮತ್ತೆಲ್ಲಿಯೋ ಒಂದು ಕ್ಷಣದೊಳಗಾಗಿ ಕಾರ್ಯವು ಜರುಗಿಬಿಡುವದಲ್ಲ ! ಈ ಅದ್ಭುತಲೀಲೆಯು ಹೇಗೆ ಜರುಗುತ್ತಿರುವದು ? ಇಂಥ ಆಶ್ಚರ್ಯಕರವಾದ ಕೃತ್ಯಗಳನ್ನು ಮಾಡು ವದಕ್ಕೆ ಅವುಗಳಿಗೆ ಶಕ್ತಿಯನ್ನು ಕೊಟ್ಟಿರುವವರು ಯಾರು ? ಯಾವ ಕಟ್ಟಳೆಗೆ

ಒಳಗಾಗಿ ಅವು ತಮ್ಮ ಕೆಲಸವನ್ನು ಮಾಡುತ್ತಿವೆ ? – ಜಿಜ್ಞಾಸುಗಳಿಗೆ ಇದೂ ಒಂದು ಕುತೂಹಲವನ್ನುಂಟುಮಾಡುವ ವಿಚಾರವೇ ಸರಿ.

ಕರ್ಮೇಂದ್ರಿಯಗಳಲ್ಲಿ ಮುಖ್ಯವಾಗಿ ವಾಗಿಂದ್ರಿಯವ್ಯಾಪಾರವನ್ನು ನೋಡಿದರೂ ಎಂಥ ಪಂಡಿತನೂ ಬೆರಗಾಗುವಂತಿದೆ. ನಾವು ಮನಸ್ಸಿನಲ್ಲಿ ಗ್ರಹಿಸಿದ ಇಂಥಿಂಥ ವಿಷಯಕ್ಕೆ ಇಂಥಿಂಥ ಗುರುತೆಂದು ಒಂದೊಂದು ಶಬ್ದವನ್ನು ಕಲ್ಪಿಸಿ, ಆ ಶಬ್ದವನ್ನು ಒಂದೊಂದು ಗೊತ್ತಾದ ಪರಿಪಾಡಿಯ ಅಕ್ಷರಗಳ ಗುಂಪಿನಿಂದ ಏರ್ಪಡಿಸಿಕೊಂಡು, ಪ್ರಕೃತಿಪ್ರತ್ಯಯಾದಿಗಳ ನೆರವನ್ನೂ ಪದಗಳ ಅನ್ವಯದಿಂದ ವಾಕ್ಯವನ್ನೂ ಏರ್ಪಡಿಸಿದರೆ ಇಂಥ ತಾತ್ಪರ್ಯವು ಹೊರಪಡುವದೆಂಬ ನಿಯಮದ ಒತ್ತಾಸೆಯನ್ನೂ ಪಡೆದು ಬಗೆಬಗೆಯ ವಾಕ್ಯಗಳನ್ನು ಕಲ್ಪಿಸಿಕೊಂಡು, ಜ್ಞಾನೇಂದ್ರಿಯಗಳು ಮುಟ್ಟಿ ಅರಿಯಲಾರದ ವಿಷಯಗಳನ್ನು ಕೂಡ ಲೀಲಾಜಾಲವಾಗಿ ತಿಳಿಸುವ ಪರಮಾಶ್ಚರ್ಯಕರವಾದ ಶಕ್ತಿಯನ್ನು ಏನೆಂದು ಹೇಳೋಣ ! ಈ ವಾಗಿಂದ್ರಿಯದ ವ್ಯಾಪಾರದಿಂದ ರೂಪುಗೊಂಡಿರುವ ವೇದ, ಶಾಸ್ತ್ರ, ಪುರಾಣ, ಕಥೆ, ಕಾದಂಬರಿ, ಪ್ರಬಂಧ, ನಾಟಕ– ಮುಂತಾದ ಶಬ್ದರಾಶಿಯನ್ನು ಕುರಿತು ಆಲೋಚಿಸಿದರೆ ಎಂಥ ವಿದ್ವಾಂಸನೂ ಚಕಿತನಾಗುತ್ತಾನೆ. ಇಂಥ ಹಿರಿಮೆಯು ವಾಕ್ಯಪ್ರಪಂಚಕ್ಕೆ ಹೇಗೆ ಬಂದಿರಬಹುದು ? ಅದನ್ನು ಹೊರಪಡಿಸುವದಕ್ಕೆ ಬೇಕಾದ ವ್ಯಾಪಾರವಿಶೇಷಗಳನ್ನು ಯಾವ ಮಹಾಮಹಿಮನು ಗೊತ್ತುಪಡಿಸಿರಬಹುದು ?

ಹೊರಗಿನ ವಿಷಯಪ್ರಪಂಚವನ್ನು ನೋಡಿ ಅದರಲ್ಲಿ ಪ್ರಕೃತಿನಿಯಮಗಳನ್ನೂ ಸೌಂದರ್ಯವನ್ನೂ ಇಟ್ಟಿರುವ ಒಂದು ಮಹಾಸತ್ತೆಯು ಇರಬೇಕೆಂದು ನಾವು ಊಹಿಸುವದು ಅತ್ಯವಶ್ಯವಾಗಿದೆಯೆಂಬುದು ನಿಜವಾದರೆ, ಅಂಥ ವಿಷಯರಾಶಿಯನ್ನೂ ತನ್ನ ಬೆಳಕಿಗೆ ಸಿಕ್ಕಿಸಿಕೊಂಡು ಅದರ ಮಹಿಮೆಯನ್ನೂ ಸೌಂದರ್ಯವನ್ನೂ ತೋರಿಸಿಕೊಡುವಂತೆ ಮಾಡುವ ಬೆಳಕುಗಳ ಒಳಪ್ರಪಂಚವನ್ನು ನೋಡಿದಾಗ ಅವುಗಳ ವ್ಯಾಪಾರನಿಯಮಗಳನ್ನು ಗೊತ್ತುಪಡಿಸುವ ಒಬ್ಬ ತೇಜೋಮಯನಾದ ದೇವನೊಬ್ಬನು ಅವಶ್ಯವಾಗಿರಲೇಬೇಕೆಂದು ನಮಗೆಲ್ಲ ಎನಿಸುವದು ಖಂಡಿತ. ವಿಷಯಗಳನ್ನು ಅರಿಯುವ ಶಕ್ತಿಯನ್ನು ಇಂದ್ರಿಯಗಳಿಗೂ ಮನಸ್ಸಿಗೂ ಕೊಟ್ಟು ಅವುಗಳು ತಮ್ಮ ತಮ್ಮ ವ್ಯಾಪಾರವನ್ನು ನಿಯತವಾಗಿ ನಡೆಯಿಸುವಂತೆ ಕಟ್ಟುಮಾಡುವ ಸರ್ವಶಕ್ತನೂ ಅವುಗಳಿಗೆ ಅಂಥ ಬೆಳಕಿನ ಶಕ್ತಿಯನ್ನು ದಾನವಾಗಿ ಕೊಡಬಲ್ಲ ತೇಜೋಮಯನೂ ಆದ ಮಹಾದೇವನೊಬ್ಬನು ಇರಲೇಬೇಕೆಂದು ನಮಗೆ ಭಾಸವಾಗುವದು ಖಂಡಿತ. ಆ ದೇವನ ಸ್ವರೂಪವನ್ನು ತಿಳಿಸುವದೇ ಈ ಉಪನಿಷತ್ತಿನ ಉದ್ದೇಶವು.

## ೨. ಆತ್ಮನೇ ಜ್ಞಾನೇಂದ್ರಿಯಕರ್ಮೇಂದ್ರಿಯಗಳ ತಿರುಳು

**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್**
**ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ।**
**ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ**
**ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ ॥ ೨ ॥**

೨. "ಆತನು ಕಿವಿಗೆ ಕಿವಿ, ಮನಸ್ಸಿಗೆ ಮನಸ್ಸು, ವಾಕ್ಕಿಗೆ ವಾಕ್ಕು, ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು; ಹೀಗಿರುವದರಿಂದ ಧೀರರು (ತಪ್ಪುತಿಳಿವಳಿಕೆಯನ್ನು) ಬಿಟ್ಟು ಈ ಲೋಕದಿಂದ ಹೊರಟು ಹೋಗಿ ಅಮೃತರಾಗುತ್ತಾರೆ."

ಕೇನೋಪನಿಷತ್ತಿನ ಮಂತ್ರಗಳು ಗುರುಶಿಷ್ಯರ ಸಂಭಾಷಣೆಯ ರೂಪದಲ್ಲಿವೆ. ಮೊದಲನೆಯ ಮಂತ್ರದಲ್ಲಿ ಶಿಷ್ಯನು "ಗುರುವೆ, ನಮ್ಮ ಇಂದ್ರಿಯಗಳು ತಮ್ಮ ತಮ್ಮ ವಿಷಯವನ್ನು ಗ್ರಹಿಸುವದಕ್ಕೆ ತೊಡಗುವದು ಯಾರ ಬಲದಿಂದ? ಇವುಗಳ ಜೀವಕಳೆಯಾದ ಪ್ರಾಣವ್ಯಾಪಾರವು ಒಂದೇಸಮನಾಗಿ ನಡೆಯುತ್ತಿರುವದು ಯಾರ ಹಿರಿಮೆಯಿಂದ? ಎಲ್ಲವನ್ನೂ ಅರಿತು ನಿಶ್ಚಯಿಸಿ ಕೆಲಸಕ್ಕೆ ತೊಡಗಿಸುವ ಮನಸ್ಸು ಹೊರಕ್ಕೆ ಬೀಳುವದು ಯಾರ ಅಗ್ಗಳಿಕೆಯಿಂದ?" ಎಂದು ಕೇಳಿದ್ದನು. ಈಗ ಗುರುವು ಅದಕ್ಕೆ ಉತ್ತರವನ್ನು ಹೇಳುವದಕ್ಕೆ ಹೊರಟಿದ್ದಾನೆ.

ಕೇಳಯ್ಯ, ಯಾವ ದೇವನ ಸಂಕಲ್ಪಮಾತ್ರದಿಂದ ಮನಃಪ್ರಾಣೇಂದ್ರಿಯಗಳು ತಮ್ಮ ತಮ್ಮ ಕೆಲಸವನ್ನು ಎಡೆಬಿಡದೆ ಗೊತ್ತಾಗಿ ನೆರವೇರಿಸುತ್ತಿವೆಯೆಂಬುದನ್ನು ಹೇಳುತ್ತೇನೆ. ಚಳಿಗಾಲದಲ್ಲಿ ತಣ್ಣಗೆ ಕೊರೆಯುತ್ತಿರುವ ತಣ್ಣೀರು ಸುಡುವ ನೀರಾಗುವದು ಏತರ ಬಲದಿಂದ? ಅದನ್ನು ಕಾಯಿಸುವ ಬೆಂಕಿಯ ಬಿಸಿಯಿಂದ. ಅಲ್ಲವೆ? 'ನೀರು ಸುಡುತ್ತದೆ'–ಎಂದು ನಾವು ಆಡಿಕೊಳ್ಳುವಾಗಲೂ ಆ ಸೂಡು ಬೆಂಕಿಯದೇ ಆಗಿರುವಂತೆ 'ಇಂದ್ರಿಯಗಳು ಅರಿಯುತ್ತವೆ'– ಎಂದು ನಾವು ಹೇಳುವಾಗಲೂ ಅವುಗಳಲ್ಲಿ ತೋರಿಕೊಳ್ಳುವ ಅರಿವು ನಿಜವಾಗಿ ಅವುಗಳಲ್ಲಿರುವದಿಲ್ಲ; ಅವುಗಳಿಗಿಂತ ಬೇರೆಯಾದ ಒಂದಾನೊಂದು ಚೈತನ್ಯದಲ್ಲಿರುವದು. ಕಣ್ಣು ನೋಡುವಾಗಲೂ ಕಿವಿಯು ಕೇಳುವಾಗಲೂ ಮೂಗು ಮೂಸುವಾಗಲೂ ನಾಲಗೆಯು ಸವಿಯುವಾಗಲೂ ಚರ್ಮವು ಸೋಕುವಾಗಲೂ ಆ ನೋಟ, ಕೇಳುವಿಕೆ, ಮೂಸುವ ಶಕ್ತಿ, ಸವಿದರಿಯುವ ಬಲ, ಸೋಕುವ ಜಾಣ್ಮೆ– ಇವೆಲ್ಲವೂ ಈ ಇಂದ್ರಿಯಗಳೆಲ್ಲಕ್ಕಿಂತ ಬೇರೆಯಾಗಿರುವ ನಮ್ಮ ಆತ್ಮಚೈತನ್ಯದಲ್ಲಿಯೇ ಇರುವವು. ಈ ಚೈತನ್ಯವು ಯಾವಾಗಲೂ ಅರಿವಿನ ರೂಪದಲ್ಲಿಯೇ ಇರುತ್ತಿದ್ದರೂ, ಕನ್ನಡಕದ ಮೂಲಕವಾಗಿ ನೋಡಿದಾಗ ಬೆಳಕು ಕನ್ನಡಕದ

ಬಣ್ಣವನ್ನೇ ತಾಳಿದಂತೆ ತೋರುವಹಾಗೆ, ಇಂದ್ರಿಯಗಳ ಮೂಲಕವಾಗಿ ನೋಡು ವಾಗ ನೋಟವೇ ಮುಂತಾದ ಹೆಸರುಗಳನ್ನೂ ರೂಪಗಳನ್ನೂ ತಳೆಯುತ್ತಿರು ವದು. ಇಂದ್ರಿಯಗಳಲ್ಲಿರುವ ಅರಿವಿನ ಹೊಳಪೆಲ್ಲವೂ ಈ ಚೈತನ್ಯದ ಬೆಳಕಿನದೇ ಎಂದರಿಯಬೇಕು.

ಇಂದ್ರಿಯಗಳೆಲ್ಲಕ್ಕೂ ಹಿಂದೆ ತಡಿಕೆಯಂತೆ ನಮ್ಮ ಮನಸ್ಸು ಇದ್ದು ಕೊಂಡಿರುವದು ನಿಜ, ಆದರೆ ಅದಕ್ಕೆ ಅರಿವಾದರೂ ಎಲ್ಲಿಂದ ಬರುತ್ತದೆ? ಅದು ಒಂದೇ ಸಲಕ್ಕೆ ಎರಡು ವಿಷಯಗಳನ್ನು ಅರಿಯಲಾರದು; ಅದರಲ್ಲಿ ಒಂದು ಸಲ ಅರಿವಾಗುತ್ತದೆ, ಇನ್ನೊಂದು ಸಲ ಆ ಅರಿವು ಮರೆಯಾಗುತ್ತದೆ. ಬಿಸಿಲಿರುವಾಗ ಸೂರ್ಯನ ಪ್ರತಿಬಿಂಬವು ನೀರಿನಲ್ಲಿ ಮೂಡಿ ಮೋಡದಿಂದ ಸೂರ್ಯನು ಮರೆ ಯಾದರೆ ತಾನೂ ಮರೆಯಾಗುವಂತೆಯೇ ಮನಸ್ಸಿನಲ್ಲಿ ತೋರುವ ಅರಿವಿಗೂ ಹುಟ್ಟುಹೊಂದುಗಳಿರುತ್ತವೆ. ಹಾಗೆ ಅರಿವು ಮೂಡುವದನ್ನೂ ಮುಳುಗು ತ್ತಿರುವದನ್ನೂ ನೋಡುವ ಶಕ್ತಿಯು ಯಾವದು? ಇದೇ ಮನಸ್ಸಿಗೂ ಇಂದ್ರಿಯ ಗಳಿಗೂ ನಿಜವಾದ ಹಿನ್ನೆಲೆಯಾಗಿರುವ ಬರಿಯರಿವು, ನಮ್ಮೊಳಗಿರುವ ಆ ದೇವನ ನೊಂದದ ಬೆಳಕು.

ಈ ಬರಿಯರಿವನ್ನು ಸಾಕ್ಷಿಯೆಂದೂ, ಆತ್ಮನೆಂದೂ, ಬ್ರಹ್ಮವೆಂದೂ ಕರೆಯು ತ್ತಾರೆ. ಸಾಕ್ಷಿಯೆಂದರೆ ಎಲ್ಲವನ್ನೂ ಅರಿವಿನಿಂದ ಬೆಳಗಿನೋಡುತ್ತಾ, ತಾನು ಯಾರಿಗೂ ಗೋಚರನಾಗದೆ, ತನ್ನ ಬೆಳಕಿನಿಂದಲೇ ತೋರಿಕೊಳ್ಳುತ್ತಿರುವವನು. ಆತ್ಮನೆಂದರೆ ಎಲ್ಲಕ್ಕೂ ತಿರುಳಾಗಿ ತಾನು ಮತ್ತೊಂದರಿಂದಾಗಿರದೆ ಇರುವ ಅಖಂಡವಸ್ತು. ಬ್ರಹ್ಮವೆಂದರೆ ಎಲ್ಲಕ್ಕೂ ಮಿಗಿಲೆನಿಸಿ ಯಾವ ದೇಶದ, ಯಾವ ಕಾಲದ, ಯಾವ ವಸ್ತುವಿನ ಸುತ್ತುಗಟ್ಟಿಗೂ ಕಟ್ಟುಬೀಳದೆ ಎಲ್ಲಕ್ಕೂ ತಳಹದಿ ಯಾಗಿರುವ ತತ್ತ್ವವು. ಈ ಸರ್ವಸಾಕಿಯಾದ ಸರ್ವಾತ್ಮನಾದ ಬ್ರಹ್ಮವೇ ನಾವು ಪರಮೇಶ್ವರನೆಂದು ಕರೆಯುವ ದೇವಾಧಿದೇವನು, ಎಂದರೆ ಬೆಳಕು ಗಳಲ್ಲೆಲ್ಲ ಇರುವ ನಿಜವಾದ ಬೆಳಕು. ಆತನು ಎಲ್ಲವನ್ನೂ ತನ್ನ ನಿತ್ಯವಾದ ಜ್ಞಾನದಿಂದ ಬೆಳಗುತ್ತಿರುವದರಿಂದ ಸರ್ವಜ್ಞನೆನಿಸಿರುತ್ತಾನೆ.

ಪರಮೇಶ್ವರನು ಶುದ್ಧವಾದ ನಿತ್ಯವಾದ ಅರಿವಿನ ರೂಪದಲ್ಲಿ ಮಾತ್ರವೇ ಇರುವದಿಲ್ಲ; ಆತನು ಪ್ರಪಂಚದಲ್ಲಿ ನಡೆಯುವ ಕ್ರಿಯೆಗಳಿಗೆಲ್ಲ ಮೂಲವಾಗಿರುವ ಶಕ್ತಿಯೂ ಆಗಿರುತ್ತಾನೆ. ನಮ್ಮ ಶರೀರದಲ್ಲಿ ಸಾಗುತ್ತಿರುವ ವ್ಯಾಪಾರಗಳನ್ನು ನಡೆಯಿಸುತ್ತಿರುವ ಕರ್ಮೇಂದ್ರಿಯಗಳಿಗೆಲ್ಲ ಪ್ರಾಣವೇ ಮೂಲವು. ಕೈಯಿಂದ ತೆಗೆದುಕೊಳ್ಳುವದು, ಕಾಲಿನಿಂದ ನಡೆಯುವದು, ನಾಲಗೆಯಿಂದ ಮಾತನಾಡು ವದು, ವಿಸರ್ಜನೇಂದ್ರಿಯದಿಂದ ಕಲ್ಮಷವನ್ನು ಹೊರಕ್ಕೆ ತಳ್ಳುವದು, ಜನ ನೇಂದ್ರಿಯದಿಂದ ಸಂಯೋಗಸುಖವನ್ನನುಭವಿಸುವದು— ಎಂಬೀ ಕಾರ್ಯ

ಗಳೆಲ್ಲವೂ ಪ್ರಾಣನ ಬಲದಿಂದಲೇ ಆ ಇಂದ್ರಿಯಗಳಲ್ಲಿ ಕಾಣಿಸಿಕೊಳ್ಳುತ್ತಿರುವವು. ಒಳಗೆ ಆಗುತ್ತಿರುವ ರಕ್ತಸಂಚಾರ, ಹೃದಯದ ಚಲನೆ ಶ್ವಾಸಕೋಶದ ವ್ಯಾಪಾರ– ಮುಂತಾದವುಗಳೂ ಆ ಪ್ರಾಣನ ಬಲದಿಂದಲೇ ನಡೆಯುತ್ತಿರುವವು. ಈ ಪ್ರಾಣನ ಕೆಲಸವನ್ನು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ- ಎಂದು ಐದು ಬಗೆಯಾಗಿ ವಿಂಗಡಿಸುವದು ನಮ್ಮ ಹಿರಿಯರ ರೂಢಿ. ಶರೀರದಲ್ಲಿ ಆಗುತ್ತಿರುವ ಕಾರ್ಯವನ್ನೆಲ್ಲ ಈ ಐದು ಬಗೆಗಳಲ್ಲಿ ಒಂದೆಂದೇ ಅವರು ಎಣಿಸುತ್ತಿದ್ದರು. ನಮ್ಮ ಶರೀರದ ಹೊರಗೆ ಕಾಣಿಸಿಕೊಳ್ಳುವ ಪ್ರಪಂಚದ ವ್ಯಾಪಾರವೂ ಪ್ರಾಣದ್ದೇ ; ಅದನ್ನು 'ವಾಯು'ವಿನ ವ್ಯಾಪಾರವೆಂದು ಕರೆಯುವದು ಹಳಬರಲ್ಲಿ ರೂಢಿಯಾಗಿತ್ತು. ಆದರೆ ಈ ಪ್ರಾಣನ ವ್ಯಾಪಾರವೆಲ್ಲವೂ ನಿಜವಾಗಿ ನೋಡಿದರೆ ಮೇಲೆ ಹೇಳಿದ ಎಲ್ಲಕ್ಕೂ ಆತ್ಮನಾದ ಬ್ರಹ್ಮವೆಂದು ಕರೆಸಿಕೊಳ್ಳುವ ಪರಮೇಶ್ವರನದೇ– ಎಂದು ವಿಚಾರದಿಂದ ತಿಳಿದುಕೊಳ್ಳಬಹುದು. ನಮ್ಮ ಶರೀರದಲ್ಲಿ ಯಾವದೊಂದು ಅವಯವವೂ ಒಂದೇ ಸಮನೆ ವ್ಯಾಪಾರಮಾಡುತ್ತಿರುವದಿಲ್ಲ. ಅದು ಕೆಲಸಮಾಡಿದಮೇಲೆ ಬಳಲಿ ಸುಮ್ಮನಾಗುವದು. ಪ್ರಾಣವು ಅವುಗಳ ಹಿಂದೆ ಇದ್ದುಕೊಂಡು ಎಲ್ಲಾ ವ್ಯಾಪಾರಗಳಿಗೂ ಬೆಂಬಲವಾಗಿದ್ದರೂ ನಮ್ಮ ಶರೀರದಲ್ಲಿ ಪ್ರಾಣವ್ಯಾಪಾರವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಸಾಗಿರುತ್ತದೆ. ಪ್ರಾಣವಾಯುವು ಕೆಲಸಮಾಡುತ್ತಿರುವವರೆಗೂ ನಾವು ಜೀವಿಸಿರುವೆವು, ಅದು ಸೋತು ಕೆಲಸವನ್ನು ಮಾಡುವದನ್ನು ನಿಲ್ಲಿಸಿಬಿಟ್ಟರೆ ಸತ್ತುಹೋಗುವೆವು ; ಆಗ 'ಪ್ರಾಣವು ಹೋಯಿತು' ಎಂದರೆ ಎಲ್ಲೆಲ್ಲಿಯೂ ಇರುವ ಪ್ರಾಣರಾಶಿಯಲ್ಲಿ ಬೆರೆಯಿತೆಂದೋ ಅಥವಾ ಮತ್ತೊಂದು ಶರೀರೇಂದ್ರಿಯಗಳ ಗುಂಪನ್ನು ಹಿಡಿದು ಕೆಲಸಮಾಡುವದೆಂದೋ ಅರ್ಥ. ಆದರೆ ಈ ಪ್ರಾಣಕ್ಕೂ ಪ್ರಾಣವಾಗಿ ಅದರ ತಿರುಳಾಗಿ, ಅದರ ವ್ಯಾಪಾರಕ್ಕೆಲ್ಲ ಬಲವನ್ನು ಒದಗಿಸಿ ಕೊಡುವ ಮೂಲವು ಯಾವದು ? ಅದೇ ನಮ್ಮ ಆತ್ಮನಾದ ಬ್ರಹ್ಮವು. ಹಗಲೆಲ್ಲ ದುಡಿದು ದುಡಿದು ಬಳಲಿ ಬೆಂಡಾಗಿ ರಾತ್ರೆ ಸುಖನಿದ್ರೆಯನ್ನು ಮಾಡಿದಬಳಿಕ ಬೆಳಗೆ ಎದ್ದರೆ ನಮಗೆ ಪುನಃ ಪ್ರಸನ್ನವಾಗಿರುತ್ತದೆ, ಇಂದ್ರಿಯಗಳು ಲವಲವಿಕೆಯಿಂದೊಡಗೂಡಿರುತ್ತವೆ, ಮೈ ಭಾರವಾಗಿದ್ದದ್ದು ಹಗುರವಾಗಿ ಪುಟಿದೆದ್ದ ಚೆಂಡಿನಂತೆ ಕೆಲಸಕ್ಕೆ ಸಿದ್ಧವಾಗುತ್ತದೆ. ಹೀಗೆ ಒಂದು ರಾತ್ರೆಯಲ್ಲಿ ಇಷ್ಟು ತ್ರಾಣವನ್ನು ನಮ್ಮ ಅಂಗಾಂಗಗಳಿಗೆಲ್ಲ ಒದಗಿಸಿಕೊಟ್ಟ ಮಹಾಶಕ್ತಿಯು ಯಾವದು ! ಅದೇ ನಮ್ಮ ಪ್ರಾಣಕ್ಕೂ ಪ್ರಾಣವಾದ ಆತ್ಮನು, ಬ್ರಹ್ಮವು, ಪರಮೇಶ್ವರನು. ಹೀಗೆ ಯಾರ ನಿಯಮದಲ್ಲಿದ್ದು ಮನಃಪ್ರಾಣಕರಣಗಳು ತಮ್ಮ ತಮ್ಮ ಕೆಲಸವನ್ನು ನೆರವೇರಿಸುವ ಕಸುವನ್ನು ಸಂಪಾದಿಸಿಕೊಳ್ಳುವವೋ ಆ ಪರಮಾತ್ಮನು ಸರ್ವಶಕ್ತನು, ಎಲ್ಲಕ್ಕೂ ಶಕ್ತಿಯನ್ನು ನೀಡಬಲ್ಲ ನಿತ್ಯಶಕ್ತಿಯು– ಎಂದು ಹೇಳುವದು ಯುಕ್ತವೇ ಆಗಿದೆಯಲ್ಲವೆ ?

ಸಾಮಾನ್ಯವಾಗಿ ಜನರು ಈ ಸರ್ವಜ್ಞನೂ ಸರ್ವಶಕ್ತನೂ ಆದ ದೇವನನ್ನು ಅರಿಯರು, ಅವರು ಅರಿತಿರುವದೆಲ್ಲ ಈ ಇಂದ್ರಿಯಗಳ ಪ್ರಪಂಚವು. ಜ್ಞಾನೇಂದ್ರಿಯಗಳಿಂದ ಹೊರಗಿನ ಪ್ರಪಂಚವನ್ನು ಅರಿತುಕೊಳ್ಳುವದು, ಕರ್ಮೇಂದ್ರಿಯಗಳಿಂದ ಅಲ್ಲಿರುವ ವಿಷಯಗಳನ್ನು ಬಳಸಮಾಡಿಕೊಳ್ಳುವದಕ್ಕೋ ದೂರಗೊಳಿಸುವದಕ್ಕೋ ಪ್ರಯತ್ನಿಸುವದು– ಇಷ್ಟೇ ಅವರ ವ್ಯವಹಾರವಾಗಿಬಿಟ್ಟಿರುತ್ತದೆ. ಅವರ ಮನಸ್ಸು ಜ್ಞಾನೇಂದ್ರಿಯಗಳನ್ನನುಸರಿಸಿ ವಿಷಯಗಳನ್ನರಿತುಕೊಳ್ಳುವದು, ಕರ್ಮೇಂದ್ರಿಯಗಳನ್ನು ಬೆಂಬಿಡಿದು ಕೆಲಸದಲ್ಲಿ ತೊಡಗುವದು, ತನ್ನಲ್ಲಿ ತಾನಿದ್ದಾಗ ತಾನು ಮಾಡಿದ ಕೆಲಸಗಳನ್ನೂ ಅನುಭವಿಸಿದ ಭೋಗಗನ್ನೂ ನೆನಸಿಕೊಂಡು ಹಿಗ್ಗುವದು, ಮಾಡಲಾಗದೆಇದ್ದ ಕೆಲಸಗಳನ್ನೂ ದೊರಕಿಸಿಕೊಳ್ಳಲಾಗದೆಇದ್ದ ಭೋಗಗಳನ್ನೂ ನೆನಸಿಕೊಂಡು ಕೊರಗುವದು, ನಾಳೆಗೆ ಯಾವದು ಹೇಗಾಗುವದೋ ಎಂದು ಕಳವಳಪಡುವದು, ಹೀಗಾಗಬೇಕೆಂದು ಮನಸ್ಸಿನ ಮಂಡಿಗೆಯನ್ನು ಕಲ್ಪಿಸಿಕೊಳ್ಳುತ್ತಿರುವದು– ಈ ಬಗೆಯ ವ್ಯಾಪಾರಗಳಲ್ಲಿಯೇ ಮುಳುಗಿರುತ್ತದೆ. ಇಂಥ ವಿಷಯಾಸಕ್ತರಿಗೆ ಇಂದ್ರಿಯ ಭೋಗವೊಂದಿಷ್ಟು ದೊರಕಿದರೆ ಹಿಗ್ಗು, ದೊರಕದಿದ್ದರೆ ಕುಗ್ಗು–ಹೀಗಾಗುತ್ತಿದ್ದು ಕೊನೆಗೆ ಇಂದ್ರಿಯಗಳು ಶರೀರದ ತೇಜವೆಲ್ಲವನ್ನೂ ಸೊರಗಿಸುತ್ತಲೂ ಮುದುರಿಕೊಳ್ಳುವದೊಂದೇ ಗತಿ. ಆದ್ದರಿಂದಲೇ ಅವರಿಗೆ **'ಮರ್ತ್ಯರು',** ಎಂದರೆ ಸಾಯುವವರು– ಎಂದು ಹೆಸರು.

ಆದರೆ, ಯಾವ ಧೀರರು ಈ ಇಂದ್ರಿಯಗಳ ಲೋಕವನ್ನು ಮೀರಿ, ಅವುಗಳ ಭೋಗವನ್ನು ಕಸಕ್ಕಿಂತ ಕಡೆಯೆಂದು ತಿಳಿದು, ಅದನ್ನು ಎಡಗಾಲಿನಿಂದೊದೆದು 'ನಾನು', 'ನನ್ನದು'– ಎಂಬ ಅಭಿಮಾನವನ್ನಳಿದು ಇಂದ್ರಿಯಮನಃಪ್ರಾಣಗಳಿಂದಾಚೆ ಇರುವ ತಮ್ಮೊಳಗಿನ ಆತ್ಮನಾದ ಪರಮೇಶ್ವರನನ್ನು ಕಂಡುಕೊಳ್ಳುವರೋ ಅಂಥವರೇ ಅಮೃತರಾಗುವರು. ಅವರಿಗೆ ಇನ್ನು ದೇಹದ ಮೂಲಕವಾಗಿ ಆಗುವ ಮರಣವಿಲ್ಲ. ಏಕೆಂದರೆ ಮರಣವೆಂಬುದು ಪ್ರಾಣದ ಸಂಬಂಧವನ್ನಗಲುವದರಿಂದಾಗುವ ಘಟನೆಯು; ಆದರೆ ಅವರು ಪ್ರಾಣಕ್ಕೂ ಪ್ರಾಣನಾಗಿರುವ ಆತ್ಮನಲ್ಲಿ ನೆಲೆನಿಂತುಬಿಟ್ಟಿರುತ್ತಾರೆ. ಪ್ರಾಣನಿಗೇ ಮರಣವಿಲ್ಲವೆಂದ ಬಳಿಕ ಪ್ರಾಣಕ್ಕೂ ಪ್ರಾಣನಾದ ಆತ್ಮನ ಸ್ವರೂಪರಾದ ಅವರಿಗೆ ಎಲ್ಲಿಯ ಮರಣ? ಆದ್ದರಿಂದ ಇಂದ್ರಿಯಗಳ ಲೋಕವನ್ನೆಲ್ಲ ಮೀರಿ ಅತೀಂದ್ರಿಯನಾದ ಪರಮೇಶ್ವರನನ್ನು ಕಂಡುಕೊಳ್ಳುವದೇ **ಅಮೃತತ್ತ್ವವು**; ಅದೇ ಪರಮ ಪುರುಷಾರ್ಥವು.

# ೩. ಆತ್ಮನನ್ನು ಅರಿಯುವ ಬಗೆ

ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನಃ ।
ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾತ್

ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ।
ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ ||೪||

೩-೪. 'ಅಲ್ಲಿಗೆ ಚಕ್ಷುರಿಂದ್ರಿಯವು ಹೋಗಲಾರದು, ವಾಕ್ಕೂ ಹೋಗಲಾರದು, ಮನಸ್ಸೂ ಹೋಗಲಾರದು ; ಇದನ್ನು ನಾವರಿಯೆವು, ಹೇಗೆ ತಿಳಿಯಹೇಳಬೇಕೋ ನಮಗೆ ತಿಳಿಯದು. ಅದು ಅರಿಯಲ್ಪಟ್ಟದ್ದಕ್ಕಿಂತಲೂ ಬೇರೆಯೇ, ಅರಿಯಲ್ಪಡದಿರುವದಕ್ಕಿಂತಲೂ ಬೇರೆಯೇ; ಹೀಗೆಂದು ಹಿರಿಯರಿಂದ ಕೇಳಿರುತ್ತೇವೆ. ಅವರು ಅದನ್ನು ನಮಗೆ ವಿವರಿಸಿ ತಿಳಿಸಿರುತ್ತಾರೆ.

ಇಂದ್ರಿಯಗಳ ಲೋಕವು ಮರ್ತ್ಯಲೋಕವು ; ಇಂದ್ರಿಯಗಳು ಸೊರಗತಕ್ಕವು, ಇಂದ್ರಿಯವಿಷಯಗಳು ಕರಗತಕ್ಕವು ; ಹೀಗಿರುವಲ್ಲಿ ಇಂದ್ರಿಯಭೋಗದ ಲೋಕವು ಹೇಗೆ ನೆಲೆಯಾದ್ದೀತು ? ಇದನ್ನು ದಾಟಿದರೆ ಅಮೃತರಾಗುವರು. ಇಂದ್ರಿಯಗಳಿಂದಾಚೆಗೆ, ಮನಸ್ಸಿನಿಂದಾಚೆಗೆ, ಅಮೃತವಾದ ಬ್ರಹ್ಮವೆಂಬ ನಮ್ಮ ನಿಜವಾದ ಆತ್ಮನಿರುವನು. ಆ ಪರಮಾತ್ಮವಸ್ತುವನ್ನು ಕಂಡುಕೊಂಡರೆ 'ಅಮೃತ ಎಂದರೆ ಎಂದೆಂದಿಗೂ ಸಾಯದ, ಅಮೃತದಂತೆ ಮಧುರವಾದ ಆನಂದಸ್ವರೂಪವು ವಶವಾಗುವದು ಎಂದು ಹೇಳಿದ್ದಾಯಿತು.

ಈಗ 'ಆ ಪರಮಾತ್ಮಸ್ವರೂಪವನ್ನು ಕಂಡುಕೊಳ್ಳುವದು ಹೇಗೆ ?' ಎಂಬ ಪ್ರಶ್ನೆಯು ತಲೆ ಎತ್ತುತ್ತದೆ. ಯಾವದನ್ನು ಕಿವಿಯಿಂದ ಕೇಳಬಹುದೋ, ಕಣ್ಣಿಂದ ನೋಡಿ ಕೈಯಿಂದ ಮುಟ್ಟಬಹುದೋ, ಮೂಗಿನಿಂದ ಮೂಸಬಹುದೋ, ನಾಲಗೆಯಿಂದ ಸವಿಯಬಹುದೋ– ಅದನ್ನು ಇಂಥ ಶಬ್ದ, ಇಂಥ ರೂಪ, ಇಂಥ ವಾಸನೆ, ಇಂಥ ರುಚಿ–ಎಂದು ಅರಿತುಕೊಳ್ಳಬಹುದು; ಮತ್ತೊಬ್ಬರಿಗೂ ಅದನ್ನು ತಿಳಿಯಹೇಳಬಹುದು. ಯಾವದು ಹೊರಗಿನ ಇಂದ್ರಿಯಗಳಿಗೆ ಗೋಚರವಾಗದಿದ್ದರೂ ಒಳಗೆ ಮನಸ್ಸಿನಿಂದ ಸುಖದುಃಖಾದಿಗಳಂತೆ ಅರಿಯುವದಕ್ಕಾಗಲಿ ದೂರ ಬಾರದಲ್ಲಿ, ಅಥವಾ ಬಹುಹಿಂದಿನ ಕಾಲದಲ್ಲಿ ಅನುಭವಿಸಿದ ವಸ್ತುಗಳಂತೆ ನೆನಪಿಗೆ ತಂದುಕೊಳ್ಳುವದಕ್ಕಾಗಲಿ, ಬಹುಮುಂದೆ ಆಗಬೇಕಾಗಿರುವ ವಸ್ತುಗಳಂತೆ ನಿರೀಕ್ಷಿಸುವದಕ್ಕಾಗಲಿ, ಎಲ್ಲಿಯೂ ಕಾಣುವಂತಿಲ್ಲದಿದ್ದರೂ ಮನೋರಥಗಳಂತೆ

ಕಲ್ಪಿಸಿಕೊಳ್ಳುವದಕ್ಕಾಗಲಿ ಬರುವದೋ, ಅದನ್ನು ಕೂಡ ಇಂಥ ಜಾತಿ, ಇಂಥ ದ್ರವ್ಯ, ಇಂಥ ಗುಣ, ಇಂಥ ಕ್ರಿಯೆ, ಇಂಥ ಸಂಬಂಧ– ಎಂದಾಗಲಿ ಅಭಾವವೆಂದಾಗಲಿ ವಿಕಲ್ಪಿಸಿ ಅರಿತುಕೊಳ್ಳಬಹುದು ; ಮತ್ತೊಬ್ಬರಿಗೆ ಹಾಗೆಂದು ತಿಳಿಯಿಸಲೂಬಹುದು. ಆದರೆ ಯಾವದು ಇಂದ್ರಿಯಗಳಿಗೂ ಗೋಚರವಲ್ಲವೋ ಮನಸ್ಸಿಗೂ ಸಿಕ್ಕುವಂತಿಲ್ಲವೋ ಅದನ್ನು ಅರಿಯುವದಾಗಲಿ ಮತ್ತೊಬ್ಬರಿಗೆ ತಿಳಿಯಪಡಿಸುವದಾಗಲಿ ಹೇಗೆ ?

ಈ ಶಂಕೆಯು ಯಾರಿಗಾದರೂ ಬರುವದು ಸಹಜವಾಗಿದೆ. ಆದರೆ ಅಷ್ಟುಮಾತ್ರದಿಂದ ಇಂದ್ರಿಯಮನಸಗಳಿಗೆ ಅಳವಾಗದ ವಸ್ತುವು ಇಲ್ಲವೇ ಇಲ್ಲವೆಂದು ನಿಶ್ಚಯಿಸುವದು ಮಾತ್ರ ಸರಿಯಲ್ಲ. ಏಕೆಂದರೆ ಯಾವದು ಇಂದ್ರಿಯಮನಗಳಿಗೆ ಸಿಕ್ಕಿಬೀಳುವದೋ ಅದೊಂದೇ ಇರುವದು– ಎಂದು ವ್ಯಾಪ್ತಿಯನ್ನು ಮಾಡಿಕೊಳ್ಳುವದಕ್ಕೆ ನಮಗೆ ಆಧಾರವಿಲ್ಲ. ಇಂದ್ರಿಯಗಳಿಗೆ ಇಂದ್ರಿಯಗಳೇ ಸಿಕ್ಕುವದಿಲ್ಲ; ಉದಾಹರಣೆಗೆ ಕಣ್ಣನ್ನು ನೋಡುವದಕ್ಕಾಗುವದಿಲ್ಲ, ಕಿವಿಯನ್ನು ಕೇಳುವದಕ್ಕಾಗುವದಿಲ್ಲ; ತನ್ನ ಮೆದುಳನ್ನು ತಾನೇ ನೋಡಿಕೊಳ್ಳುವದಕ್ಕೆ ಆಗುವದಿಲ್ಲ ಅಷ್ಟುಮಾತ್ರದಿಂದ ತನಗೆ ಕಣ್ಣೇ ಇಲ್ಲವೆಂದೂ ಕಿವಿಯೇ ಇಲ್ಲವೆಂದೂ ಮೆದುಳೇ ಇಲ್ಲವೆಂದೂ ಯಾರಾದರೂ ಹೇಳುತ್ತಾರೆಯೆ ? ಇಲ್ಲ.

ಇಲ್ಲೊಂದು ಆಕ್ಷೇಪ : ನಮ್ಮ ಕಣ್ಣನ್ನು ನಾವು ನೋಡದಿದ್ದರೂ ಮಿಕ್ಕವರು ನೋಡಿದ್ದಾರೆ, ಹಾಗೆಯೇ ಒಬ್ಬರ ಕಿವಿಯನ್ನೂ ಮೆದುಳನ್ನೂ ಮತ್ತೊಬ್ಬರು ನೋಡಬಹುದು ; ಆದರೆ ಅತೀಂದ್ರಿಯವಸ್ತುಗಳನ್ನು ಯಾರೊಬ್ಬರೂ ಕಂಡೇ ಇರುವದಿಲ್ಲ! ಇದೂ ಅಲ್ಲದೆ ಕಣ್ಣು, ಕಿವಿ– ಮುಂತಾದವುಗಳಿಗಿಂತ ಬೇರೆಯಾಗಿಯೇ ಇಂದ್ರಿಯಗಳು ಇವೆಯೆಂದು ಇಟ್ಟುಕೊಂಡರೂ ಅವುಗಳಿವೆಯೆಂಬುದಕ್ಕೆ ನಮ್ಮ ನಮ್ಮ ಮನಸ್ಸೇ ಪ್ರಮಾಣವಾಗಿರುತ್ತದೆ ; ಆದರೆ ಇಂದ್ರಿಯಗಳನ್ನೂ ಮಾತನ್ನೂ ಮನಸ್ಸನ್ನೂ ಮೀರಿರುವ ಪರಮಾತ್ಮವಸ್ತುವೊಂದಿದೆ ಎನ್ನುವದಕ್ಕೆ ಯಾವ ಪ್ರಮಾಣವಿದೆ ?

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ ಚಕ್ಷುರಿಂದ್ರಿಯವೇ ಮುಂತಾದವು ಹೇಗೆ ತಮ್ಮನ್ನು ತಾವು ಅರಿತುಕೊಳ್ಳಲಾರವೋ ಹಾಗೆಯೇ ಮನಸ್ಸೂ ತನ್ನನ್ನು ತಾನೇ ಅರಿತುಕೊಳ್ಳಲಾರದು. ಆದರೂ ಮನಸ್ಸು ಇದೆಯೆಂದೇ ನಾವೆಲ್ಲರೂ ನಿಶ್ಚಯಿಸಿರುತ್ತೇವೆ. ಒಂದುವೇಳೆ ಮನಸ್ಸಿನ ಒಂದು ಭಾಗವು ಮತ್ತೊಂದು ಭಾಗವನ್ನು ಅರಿಯುವ ಶಕ್ತಿಯುಳ್ಳದ್ದಾಗಿದೆ–ಎಂದು ಕಲ್ಪಿಸಿದರೂ ಒಟ್ಟುಮನಸ್ಸನ್ನು ನಾವು ಅರಿಯುವದು ಹೇಗೆ?– ಎಂಬ ಪ್ರಶ್ನೆಯು ಹಾಗೆಯೇ ಉಳಿದುಕೊಳ್ಳುತ್ತದೆ. ಮನಸ್ಸಿನ ಒಂದು ಭಾಗಕ್ಕೆ ಇನ್ನೊಂದು ಭಾಗವನ್ನು ಅರಿಯುವ ಶಕ್ತಿಯಿದೆ–ಎಂದು ನಾವು ಕಲ್ಪಿಸುವಾಗ ನಾವು ಮನಸ್ಸಿನ ಯಾವ ಭಾಗವೂ ಅಲ್ಲದೆ ಅದಕ್ಕೆ ಹೊರಚಾಚಾಗಿಯೇ ನಿಲ್ಲಬೇಕಾಗುವದಲ್ಲವೆ ? ಯಾವ ನಾವು ಮನಸ್ಸನ್ನೆಲ್ಲ

ಒಟ್ಟಾಗಿ ಅರಿಯುವುದೋ ಅದೇ ನಮ್ಮ ಆತ್ಮನು ; ಆ ಆತ್ಮನೇ ಇಂದ್ರಿಯ ಮನಗಳನ್ನು ಮೀರಿರುವನೆಂದು ಶ್ರುತಿಯಲ್ಲಿ ಹೇಳಿರುವ ವಸ್ತು—ಎಂದು ನಾವು ಸುಲಭವಾಗಿ ತರ್ಕಿಸಬಹುದಾಗಿದೆ. ಆದ್ದರಿಂದ ನಾವು ಆತ್ಮನನ್ನು ಹೊರಗಿನ ವಿಷಯಗಳಂತೆಯೂ ಇಂದ್ರಿಯಗಳಂತೆಯೂ ತಿಳಿವಳಿಕೆಗೆ ಗೋಚರವಾಗಿಸಿಕೊಳ್ಳುವದಕ್ಕೆ ಆಗದೆ ಇದ್ದರೂ ಮನಸ್ಸಿನಿಂದ ಅರಿತು ಮಾತಿನಿಂದ ಮತ್ತೊಬ್ಬರಿಗೆ ಹೇಳಿ ತಿಳಿಸಿಕೊಡುವದಕ್ಕೆ ಆಗದೆ ಇದ್ದರೂ. ಆತ್ಮನು ಇಲ್ಲವೆಂದು ಶಂಕಿಸುವದಕ್ಕೆ ಕಾರಣವೇನೂ ಇಲ್ಲ.

ಯುಕ್ತಿಯಿಂದಲೇ ನಾವು ಆತ್ಮನನ್ನು ನಿಶ್ಚಯಿಸುವದಾಗಿದ್ದರೆ, 'ಈ ಯುಕ್ತಿಯು ಸರಿಯೊ ತಪ್ಪೊ—ಯಾರು ಬಲ್ಲರು ? ಮನಸ್ಸನ್ನು ನಾವು ಅರಿಯುವೆವೆಂದು ಕಲ್ಪಿಸುವಾಗಲೂ ಮನಸ್ಸಿನ ಒಂದಂಶವೇ ಅರಿಯುವದಾಗಿ ಏಕೆ ಇರಬಾರದು ?' ಎಂದುಕೂಡ ಸಂಶಯಪಡಬಹುದು. ಆದರೆ ಈಗ ನಾವು ವಿಚಾರಮಾಡಿ ನಿಶ್ಚಯಿಸಿರುವದು ಕೇವಲ ಯುಕ್ತಿಯಿಂದಲ್ಲ. ಮನಸ್ಸನ್ನೂ ಇಂದ್ರಿಯಗಳನ್ನೂ ಒಟ್ಟುಗೂಡಿಸಿ ಬೆಳಗುವ ಚೈತನ್ಯವು ನಮ್ಮಲ್ಲಿದೆ—ಎನ್ನುವದು ಅನುಭವವು, ಬರಿದು ತರ್ಕವಲ್ಲ. ಇದು ಅನುಭವವೇ ಎಂಬುದನ್ನು ಮತ್ತೊಂದು ಅನುಭವವು ಬಲಪಡಿಸುತ್ತದೆ. ಅದು ಹೇಗೆಂದರೆ, ನಾವು ಈಗ ಕಾಣುತ್ತಿರುವ ಮನಸ್ಸು, ಇಂದ್ರಿಯಗಳು, ವಿಷಯ—ಈ ಒಟ್ಟನ್ನು ಎಚ್ಚರದಲ್ಲಿ ಮಾತ್ರ ಕಾಣುತ್ತಿರುತ್ತೇವೆ ; ಇದನ್ನು ಕನಸಿಲ್ಲದ ಬರಿನಿದ್ರೆಯಲ್ಲಿ ಯಾರಾದರೂ ಕಂಡದ್ದುಂಟೆ ? ಕಾಣುವ ಆಶೆಯುಂಟೆ ? ಇಲ್ಲವೇ ಇಲ್ಲ. ಆದರೆ ಆಗ ನಾವು ಇರುವದಿಲ್ಲವೆಂದು ಯಾರೂ ಹೇಳುವದಿಲ್ಲ ; 'ಸುಖವಾಗಿ ನಿದ್ರೆಮಾಡಿದೆನು, ಅಲ್ಲಿ ಏನೊಂದನ್ನೂ ಕಾಣಲಿಲ್ಲ' ಎಂದು ಹೇಳುವೆವಲ್ಲ, ಅದು ಏತರ ಅನುಭವದಿಂದ ? ಎಚ್ಚರದಲ್ಲಿ ಎಲ್ಲವನ್ನೂ ಕಾಣುವವರೂ ತನಿನಿದ್ರೆಯಲ್ಲಿ ಏನೊಂದನ್ನೂ ಕಾಣದೆ ಏನೊಂದನ್ನೂ ಕಾಣಲಿಲ್ಲವೆಂಬ ಅನುಭವದ ನೆನಹನ್ನು ಎಚ್ಚರಕ್ಕೆ ಒದಗಿಸಿಕೊಡುವವರೂ ಯಾರು ? ಅದೇ ನಮ್ಮ ಆತ್ಮಚೈತನ್ಯವು. ನಿದ್ರೆಯಲ್ಲಿ ನಾವಿರುತ್ತೇವೆ, ಮನಸ್ಸಾಗಲಿ ವಾಕ್ಕಾಗಲಿ ಇಂದ್ರಿಯಗಳಾಗಲಿ ಹೊರಗಿನ ವಿಷಯಪ್ರಪಂಚವಾಗಲಿ ಇರುವದೇ ಇಲ್ಲ. ಆದ್ದರಿಂದ ನಮ್ಮ ಆತ್ಮನು ಮನಸ್ಸು ವಾಕ್ಕು, ಇಂದ್ರಿಯಗಳು— ಎಲ್ಲವನ್ನೂ ದಾಟಿ, ಅವುಗಳಲ್ಲಿ ಯಾವುದೊಂದಕ್ಕೂ ನಿಲುಕದೆ ತಾನೇತಾನಾಗಿ ಇರಬಲ್ಲನೆಂದು ಸಿದ್ಧವಾಯಿತು.

ಈಗ ಆತ್ಮನನ್ನು ಏತರಿಂದ ಅರಿತುಕೊಳ್ಳಬೇಕು ? ಹೇಗೆ ಮತ್ತೊಬ್ಬರಿಗೆ ತಿಳಿಯಪಡಿಸಬೇಕು ?—ಎಂಬ ಎರಡು ಪ್ರಶ್ನೆಗಳಿಗೂ ಉತ್ತರವು ಸಿಕ್ಕಂತಾಯಿತು. ಅದು ಹೇಗೆಂದರೆ ಪ್ರಪಂಚದಲ್ಲಿ ಅರಿಯಲ್ಪಡುವದು, ಅರಿಯಲ್ಪಡದಿರುವದು— ಎಂಬ ಎರಡು ವಿಭಾಗವಿರುತ್ತದೆ. ನಮ್ಮ ಮನಸ್ಸಿನಿಂದ ಹಿಡಿದು ಹೊರಗಿನ ವಿಷಯಗಳವರೆಗಿನ ಎಲ್ಲಾ ಪ್ರಪಂಚವೂ ಎಚ್ಚರದಲ್ಲಿ ಅರಿಯಲ್ಪಡುತ್ತದೆ, ಅದು

ನಮ್ಮ ಅನುಭವಕ್ಕೆ ಆಗ ಗೋಚರವಾಗಿರುತ್ತದೆ. ಇದೇ ಪ್ರಪಂಚವು ಸುಷುಪ್ತಿಯಲ್ಲಿ ನಾವು ಯಾವ ಕನಸನ್ನೂ ಕಾಣದೆ ನಿದ್ರೆಮಾಡುತ್ತಿರುವಾಗ, ಅರಿಯಲ್ಪಡದೆ ಹೋಗುತ್ತದೆ, ನಮ್ಮ ಅನುಭವಕ್ಕೆ ದೂರವಾಗಿರುತ್ತದೆ. ಸುಷುಪ್ತಿಯಲ್ಲಿ ಪ್ರಪಂಚವು ಅರಿಯಲ್ಪಡುವದಿಲ್ಲವೆಂದರೆ ಪ್ರಪಂಚದಲ್ಲಿರುವ ಚೇತನಾಚೇತನ ವಸ್ತುಗಳೆಲ್ಲವೂ ನಮ್ಮ ಮನಇಂದ್ರಿಯಾದಿ ಒಳಗಿನ ಉಪಕರಣಗಳೆಲ್ಲವೂ ಕಾಣದೆ ಇರುತ್ತವೆ–ಎಂದೇ ಅರ್ಥವಾದ್ದರಿಂದ ಪ್ರಪಂಚವನ್ನು ನಾವು ಅರಿಯದಿದ್ದರೂ ಮತ್ತೊಬ್ಬರು ಅರಿಯುವರೆಂಬ ಶಂಕೆಗೆ ಆಸ್ಪದವಿರುವದಿಲ್ಲ. ಅಂತೂ ಪ್ರಪಂಚವು ಅರಿಯಲ್ಪಡುವದು, ಅರಿಯಲ್ಪಡದೆ ಇರುವದು– ಎಂಬ ಎರಡು ವಿಧವಾಗಿರಬಹುದು. ಆದರೆ ಆತ್ಮನು ಇವೆರಡನ್ನೂ ತನ್ನ ಚೈತನ್ಯದಿಂದ ಬೆಳಗುತ್ತಿರುವದರಿಂದ ಅವನು ಒಂದೇ ರೂಪದಲ್ಲಿರುತ್ತಾನೆ, ಅವನು ಅರಿಯಲ್ಪಡುವದೆಂಬ ರೂಪವನ್ನಾಗಲಿ ಅರಿಯಲ್ಪಡದಿರುವದೆಂಬ ರೂಪವನ್ನಾಗಲಿ ತಳೆಯುವವನಲ್ಲ. ಹೀಗೆ ಅರಿಯಲ್ಪಡದಿದ್ದಮಾತ್ರದಿಂದ ಆತ್ಮನೇ ಇಲ್ಲವೆಂದು ಹೇಳುವದಕ್ಕೇನೂ ಬರುವದಿಲ್ಲ; ಏಕೆಂದರೆ ಅರಿಯಲ್ಪಡುವಿಕೆಯೇ ಇರುವಿಕೆಯಲ್ಲ. ಪ್ರಪಂಚದ ವಿಷಯಕ್ಕೆ ಅದರ ಇರುವಿಕೆ– ಎಂದು ಹೇಳಿದರೂ ಹೇಳಬಹುದು; ಏಕೆಂದರೆ ಅರಿಯಲ್ಪಡದೆ ಅದು ಇರುವದೆನ್ನುವದಕ್ಕೆ ಯಾವ ಪ್ರಮಾಣವೂ ಇಲ್ಲ. ಆದರೆ ನಮ್ಮ ಆತ್ಮನು ಯಾವಾಗಲೂ ಅರಿಯುವ ಚೈತನ್ಯವೇ ಆಗಿದ್ದು ಅರಿಯಲ್ಪಡುವ ಮತ್ತು ಅರಿಯಲ್ಪಡದ ಸ್ಥಿತಿಗಳನ್ನು ಹೊಂದುವ ಪ್ರಪಂಚಕ್ಕಿಂತ ಬೇರೆಯಾಗಿರುತ್ತಾನೆ. ಆದ್ದರಿಂದ ಆತ್ಮನನ್ನು ಮನಸ್ಸಿನಿಂದಲಾಗಲಿ ವಾಕ್ಕಿನಿಂದಲಾಗಲಿ ಅರಿಯುವದಕ್ಕೂ ಹೇಳುವದಕ್ಕೂ ಆಗದಿದ್ದರೂ ಮನಸ್ಸಿನಿಂದ ಅರಿಯುವದಕ್ಕಾಗದ ರೂಪದವನು, ಮಾತಿನಿಂದ ಹೇಳುವದಕ್ಕೆ ಬಾರದ ರೂಪದವನು–ಎಂದು ಅರಿತುಕೊಳ್ಳಬಹುದು, ಮತ್ತೊಬ್ಬರಿಗೆ ತಿಳಿಯಿಸಲೂ ಬಹುದು. ಹೀಗೆಯೇ ವೇದಾಂತಿಗಳು ಅನಾದಿಕಾಲದಿಂದಲೂ ಬ್ರಹ್ಮವನ್ನು ತಾವೂ ಅರಿತುಕೊಂಡು ಇತರರಿಗೂ ತಿಳಿಯಪಡಿಸುತ್ತಾಬಂದಿರುತ್ತಾರೆ.

ಆದ್ದರಿಂದ ಆತ್ಮನನ್ನು ಹೇಗೆ ತಿಳಿಯಬೇಕು? ಮತ್ತೊಬ್ಬರಿಗೆ ಹೇಗೆ ತಿಳಿಸಬೇಕು?–ಎಂಬ ಪ್ರಶ್ನೆಗೆ ಇದೇ ಉತ್ತರವು. ಆತ್ಮನನ್ನು ಮಿಕ್ಕ ವಿಷಯಗಳಂತೆ ಇಂದ್ರಿಯಗಳಿಂದಲಾಗಲಿ ಮನಸ್ಸಿನಿಂದಲಾಗಲಿ ನೋಡಿ ಅಥವಾ ಊಹಿಸಿ ತಿಳಿಯುವದಕ್ಕಾಗುವದಿಲ್ಲ; ಮಾತಿನಿಂದ ಅದನ್ನು ಬಣ್ಣಿಸಿ ತಿಳಿಯಿಸುವದಕ್ಕೂ ಆಗುವದಿಲ್ಲ; ಅದನ್ನರಿಯುವದಕ್ಕೆ ಆಗಮವೇ ಉಪಾಯವು. ಆಗಮವೆಂದರೆ ತಿಳಿಯುವ ಅಥವಾ ತಿಳಿಯಲಾಗದ ವಿಷಯರಾಶಿಯನ್ನು ಬಿಟ್ಟು ತಮ್ಮ ಸ್ವರೂಪದಲ್ಲಿಯೇ ನೆಲೆನಿಂತವರ ಅನುಭವದ ಉಪದೇಶವು. ಈ ಉಪದೇಶವೇ ಆತ್ಮನನ್ನು ಅರಿಯುವದಕ್ಕೂ ಮತ್ತೊಬ್ಬರಿಗೆ ತಿಳಿಯಿಸುವದಕ್ಕೂ ಉಪಾಯವಾಗಿರುತ್ತದೆ.

———

# ೪. ಬ್ರಹ್ಮದ ಪರಮಾರ್ಥಸ್ವರೂಪ

ಯದ್ ವಾಚಾऽನಭ್ಯುದಿತಂ ಯೇನ ವಾಗಭ್ಯುದ್ಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥೫॥

ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥೬॥

ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಗ್ಂಷಿ ಪಶ್ಯತಿ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ

ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಗ್ಂ ಶ್ರುತಮ್
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥೮॥

ಯತ್ ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥೯॥

೫–೯. 'ಯಾವದನ್ನು ಮಾತಿನಿಂದ ಹೇಳಲಾಗುವದಿಲ್ಲವೋ ಯಾವದು ಮಾತನ್ನೂ ಹೇಳಬಲ್ಲದೋ ಅದೇ ಬ್ರಹ್ಮವೆಂದು ನೀನು ತಿಳಿದುಕೊ; 'ಇದು' ಎಂದು ಉಪಾಸನೆಮಾಡುವರಷ್ಟೆ, ಇದು ಬ್ರಹ್ಮವಲ್ಲ. ಯಾವದನ್ನು ಮನಸ್ಸಿನಿಂದ ಮನನಮಾಡಲಾಗುವದಿಲ್ಲವೋ ಯಾವದೇ ಮನಸ್ಸನ್ನು ಮನನಮಾಡುವದೆಂದು ಹೇಳುವರೋ, ಅದೇ ಬ್ರಹ್ಮವೆಂದು ನೀನು ತಿಳಿದುಕೊ; ಇದು ಎಂದು ಉಪಾಸನೆಮಾಡುವ ಇದಲ್ಲ. ಯಾವದನ್ನು ಕಣ್ಣಿನಿಂದ ಕಾಣಲಾಗುವದಿಲ್ಲವೋ ಯಾವದರಿಂದ ನೋಟಗಳನ್ನೆಲ್ಲ ನೋಡುತ್ತಾರೋ, ಅದೇ ಬ್ರಹ್ಮವೆಂದು ನೀನು ತಿಳಿ; ಇದು ಎಂದು ಉಪಾಸನೆಮಾಡುವ ಇದಲ್ಲ. ಯಾವದನ್ನು ಕಿವಿಯಿಂದ ಕೇಳಲಾಗುವದಿಲ್ಲವೋ ಯಾವದರಿಂದ ಈ ಶ್ರೋತ್ರವನ್ನು ಕೇಳಬಹುದೋ, ಅದೇ ಬ್ರಹ್ಮವೆಂದು ತಿಳಿ; ಇದು ಎಂದು ಉಪಾಸನೆಮಾಡುತ್ತಾರಷ್ಟೆ, ಇದಲ್ಲ. ಯಾವದನ್ನು ಘ್ರಾಣೇಂದ್ರಿಯದಿಂದ ಮೂಸುವದಕ್ಕಾಗದೋ ಯಾವದು ಘ್ರಾಣವನ್ನೂ ತನ್ನ ಕೆಲಸಕ್ಕೆ ಹಚ್ಚುವದೋ, ಅದೇ ಬ್ರಹ್ಮವೆಂದು ನೀನು ತಿಳಿ; ಇದು ಎಂದು ಉಪಾಸನೆಮಾಡುವರಷ್ಟೆ, ಇದಲ್ಲ.'

ಬ್ರಹ್ಮವೆಂದರೆ ಎಲ್ಲಕ್ಕೂ ಮಿಗಿಲಾದ ಪರಮೇಶ್ವರನ ಸ್ವರೂಪವು. ಈ ಸ್ವರೂಪವು ಎರಡು ಬಗೆಯಾಗಿರುತ್ತದೆ. ಇವುಗಳಲ್ಲಿ ಒಂದು ಉಪಾಸಕರಾದ ಭಕ್ತರು ಧ್ಯಾನಮಾಡುವದಕ್ಕೆಂದು ಉಪಾಧಿಗಳನ್ನೂ ಸೇರಿಸಿಕೊಂಡು ಶಾಸ್ತ್ರದಲ್ಲಿ

ತಿಳಿಸಿರುವ ರೂಪವು; ಇನ್ನೊಂದು ಯಾವ ಉಪಾಧಿಯೂ ಇಲ್ಲದ ಪರತತ್ತ್ವ ರೂಪವು. ಒಂದು ವ್ಯಕ್ತರೂಪವು, ಇನ್ನೊಂದು ಅವ್ಯಕ್ತರೂಪವು; ಒಂದು ಸಗುಣರೂಪವು, ಇನ್ನೊಂದು ನಿರ್ಗುಣರೂಪವು; ಒಂದು ಸವಿಶೇಷರೂಪವು, ಇನ್ನೊಂದು ನಿರ್ವಿಶೇಷರೂಪವು. ಇವೆರಡರೊಳಗೆ ಹಿಂದಿನ ಮಂತ್ರಗಳಲ್ಲಿ ಹೇಳಿರುವದು ನಿರುಪಾಧಿಕವಾದ ಅವ್ಯಕ್ತವಾದ ನಿರ್ಗುಣವಾದ ನಿರ್ವಿಶೇಷರೂಪವು. ಅದನ್ನು ತಿಳಿಯುವದು ಸಾಮಾನ್ಯರಿಗೆ ಬಹಳ ಕಷ್ಟ. ಏಕೆಂದರೆ ದೇಹಾಭಿಮಾನದಿಂದ ಕೂಡಿದ ಜನರು ಹೊರಗಿರುವ ಶಬ್ದಸ್ಪರ್ಶರೂಪರಸಗಂಧಗಳಿಗೇ ಹೆಚ್ಚಿನ ಬೆಲೆಯನ್ನು ಕೊಡುತ್ತಾರೆ, ಅವರಿಗೆ ವಿಷಯವಲ್ಲದ ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳುವದು ಆಗುವದಿಲ್ಲವೆಂಬುದಿಷ್ಟೇ ಅಲ್ಲ, ಅವರು ಅಂಥ ಸ್ವರೂಪವೇ ಇಲ್ಲವೆಂದುಕೂಡ ಭಾವಿಸುತ್ತಾರೆ. ಆದ್ದರಿಂದ ಆ ಪರಮಸೂಕ್ಷ್ಮಸ್ವರೂಪವನ್ನು ಒತ್ತಿ ತಿಳಿಸುವದಕ್ಕೆ ಮೇಲಿನ ಮಂತ್ರಗಳು ಬಂದಿರುತ್ತವೆ.

ಭೂಮಿಯೊಳಗೆ ನೀರು ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಜನರು ಅದನ್ನು ಇದೆಯೆಂದು ಪರಿಗಣಿಸುವದಿಲ್ಲ; ಅದು ಯಾವಾಗಲಾದರೂ ನೆಲವನ್ನು ಕೊರೆದುಕೊಂಡು ಮೇಲಕ್ಕೆ ಚಿಲ್ಲನೆ ಹಾರಿದರೆ ಆಗ ನೀರು ಉಕ್ಕಿತೆಂದು ಅದಕ್ಕೆ ಬೆಲೆಯನ್ನು ಕೊಡುತ್ತಾರೆ. ಬೆಂಕಿಯು ಉಷ್ಣರೂಪದಿಂದ ಜಗತ್ತೆಲ್ಲವನ್ನೂ ಆವರಿಸಿದ್ದರೂ ಅದನ್ನು ಇದೆಯೆಂದು ಜನರು ಭಾವಿಸುವದಿಲ್ಲ; ಮರಗಳ ತಿಕ್ಕಾಟದಿಂದಲೋ ಅಥವಾ ಬೇಸಗೆಯ ಧಗೆಯಿಂದಲೋ ಕಾಡು ಹತ್ತಿಕೊಂಡು ಉರಿಯುವದಕ್ಕೆ ಮೊದಲುಮಾಡಿದಾಗ ಆ ಭುಗಿಲ್ಭುಗಿಲೆಂಬ ಜ್ವಾಲೆಯನ್ನು ಕಂಡು ಬೆಂಕಿಗೆ ಬೆಲೆಯನ್ನು ಕೊಡುತ್ತಾರೆ. ವಾಯುವು ಭೂಮಂಡಲವನ್ನೆಲ್ಲ ಸುತ್ತಿಕೊಂಡಿದ್ದರೂ ಅದಕ್ಕೆ ಯಾವ ಬೆಲೆಯೂ ಜನರ ಕಣ್ಣಿನಲ್ಲಿರುವದಿಲ್ಲ; ಯಾವದಾದರೊಂದು ಕಾರಣದಿಂದ ಬಿರುಗಾಳಿಯೆದ್ದು ಮರಗಳನ್ನೂ ಕಟ್ಟಡಗಳನ್ನೂ ಕೆಡಹಿದರೆ, ಆಗ ಅವರು ವಾಯುವಿನ ಕಾರ್ಯವಿದೆಂದು ಆಶ್ಚರ್ಯದಿಂದ ನೋಡುತ್ತಾರೆ. ಹೀಗೆ ಅವ್ಯಕ್ತರೂಪವನ್ನು ಕಡೆಗಣಿಸುವದೂ ವ್ಯಕ್ತರೂಪಕ್ಕೆ ಹೆಚ್ಚಿನ ಬೆಲೆಯನ್ನು ಕೊಡುವದೂ ಸ್ಥೂಲದೃಷ್ಟಿಯ ಮಾನವನ ಸ್ವಭಾವವಾಗಿರುತ್ತದೆ. ಆದರೂ ಪರಮಾರ್ಥವೇನು ? ವ್ಯಕ್ತರೂಪವು ಆಗಿನಕಾಲಕ್ಕೆ ಹೊರತೋರಿಕೊಂಡದ್ದು, ಅವ್ಯಕ್ತರೂಪವು ಪರಮಾರ್ಥವಾದದ್ದು; ವ್ಯಕ್ತರೂಪವು ನಮ್ಮ ಚಿಂತನೆಗೆ ಉಪಯೋಗವಾಗತಕ್ಕದ್ದು, ಅವ್ಯಕ್ತರೂಪವು ನಿಜವಾಗಿರುವದಾಗಿ ಜ್ಞಾನದಿಂದ ಅರಿಯತಕ್ಕದ್ದು. ಈ ಕಾರಣದಿಂದಲೇ ಇಲ್ಲಿ ಉಪಾಸ್ಯವಾದ ವ್ಯಕ್ತರೂಪವನ್ನು ನಿಜವಾದ ಬ್ರಹ್ಮವೆಂದು ತಿಳಿಯದಿರು–ಎಂದು ಉಪದೇಶಿಸಿರುತ್ತದೆ.

ಯಾವ ಉಪಾಸ್ಯರೂಪವಾಗಲಿ ಹೊರಗೆ ಒಂದು ಆಕಾರವನ್ನು ತೆಗೆದ್ದುಕೊಂಡುಬಂದರೆ ಅದನ್ನು ಕಣ್ಣಿನಿಂದ ನೋಡಬಹುದು, ಅದರಿಂದ ಹೊರಡುವ

ಮಾತುಗಳನ್ನು ಕಿವಿಯಿಂದ ಕೇಳಬಹುದು, ಅದನ್ನು ಕೈಯಿಂದ ಮುಟ್ಟಬಹುದು, ಅದರ ವಾಸನೆಯನ್ನು ಮೂಗಿನಿಂದ ತಿಳಿಯಬಹುದು, ರುಚಿಯನ್ನು ನಾಲಗೆಯಿಂದ ಸವಿಯಬಹುದು. ಅದರ ಹತ್ತಿರಕ್ಕೆ ಹೋಗಬಹುದು, ಅದರಿಂದ ದೂರ ಸರಿಯಬಹುದು, ಅದನ್ನು ಹಿಡಿದುಕೊಳ್ಳಬಹುದು, ಅದರೊಡನೆ ಸಂಭಾಷಣೆ ಮಾಡಬಹುದು, ಅದರ ವಿಷಯವಾಗಿ ಮನಸ್ಸಿನಲ್ಲಿ ಚಿಂತಿಸಬಹುದು. ಅಂತೂ ಅದಕ್ಕೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ– ಎಂಬ ಗುಣಗಳಿರುತ್ತವೆ; ಅದು ಸ್ಥೂಲವೋ ಸೂಕ್ಷ್ಮವೋ, ಒಂದೋ ಎರಡೋ, ಎತ್ತರವೋ ಗಿಡ್ಡವೋ– ಎಂದು ಬಣ್ಣಿಸಿ ಹೇಳುವದಕ್ಕೂ ಬರುತ್ತದೆ. ಅದರ ಮಹಿಮೆಯು ಎಷ್ಟೇ ಇರಲಿ, ಅದು ಇಷ್ಟು ಎಂಬ ಅಳತೆಗೆ ಸಿಕ್ಕಿರುತ್ತದೆ. ಅಲ್ಲವೆ? ಹಾಗಿದ್ದರೆ ಅದು 'ಬ್ರಹ್ಮವು' ಎಂದು ಹೇಗೆ ಆದೀತು? ಬ್ರಹ್ಮವೆಂದರೆ ದೇಶದಿಂದಲೂ ಕಾಲದಿಂದಲೂ ವಸ್ತುವಿನಿಂದಲೂ ಕಟ್ಟುಪಡೆಯದೆ ಇರುವ ಅನಂತವಾದ ರೂಪವು. ಇಲ್ಲಿದೆ, ಅಲ್ಲಿಲ್ಲ; ಈಗ ಇದೆ, ಆಗ ಇರಲಿಲ್ಲ; ಇದಲ್ಲ, ಅದು ಹೌದು– ಎಂದು ಅದನ್ನು ದೇಶಕಾಲವಸ್ತುಗಳಿಗೆ ಸಂಬಂಧಿಸಿ ಹೇಳುವದಕ್ಕೆ ಬರುವಹಾಗಿರುವದಿಲ್ಲ. ಅದರ ಹೆಸರು ಇಂಥದ್ದು, ಜಾತಿ ಇಂಥದ್ದು, ಗುಣವು ಇಂಥದ್ದು, ಕ್ರಿಯೆಯು ಇಂಥದ್ದು– ಎಂದುಮುಂತಾಗಿ ವಿಕಲ್ಪಿಸಿ ಮಾತುಗಳಿಂದ ಅದನ್ನು ಬಣ್ಣಿಸಿ ಹೇಳುವದಕ್ಕೆ ಆಗುವಹಾಗೇ ಇರುವದಿಲ್ಲ; ಏಕೆಂದರೆ ಅದು ಮನಸ್ಸಿನಿಂದ ಚಿಂತಿಸುವದಕ್ಕೆ ಆಗುವಂತಿರುವದಿಲ್ಲ. ಆದ್ದರಿಂದಲೇ ಪೂರ್ವದಲ್ಲಿ ಒಮ್ಮೆ ಶ್ರೀಮನ್ನಾರಾಯಣನು ನಾರದರಿಗೆ ತನ್ನ ವಿಶ್ವರೂಪವನ್ನು ತೋರಿಸಿದಬಳಿಕ: "ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ। ಸರ್ವಭೂತಗುಣೈರ್ಯುಕ್ತಂ ನೈವಂ ತ್ವಂ ಜ್ಞಾತುಮರ್ಹಸಿ॥" (ಶಾಂ. ಮೋ. ೩೩೯–೪೮) "ಎಲೈ ನಾರದನೆ, ನನ್ನನ್ನು ನೋಡುತ್ತಿರುವೆಯೆಂದು ತಿಳಿದಿರುವೆಯಲ್ಲ, ಇದು ನಾನು ಸೃಷ್ಟಿಸಿದ ಮಾಯೆಯು; ನಾನು ಈ ರೀತಿಯಲ್ಲಿ ಸರ್ವಭೂತಗಳ ಗುಣಗಳಿಂದಲೇ ಕೂಡಿರುವೆನೆಂದು ತಿಳಿಯಬೇಡ" ಎಂದು ಹೇಳಿರುತ್ತಾನೆ. ಈ ಮಂತ್ರಗಳ ತಾತ್ಪರ್ಯವೂ ಇದೇ ಆಗಿರುತ್ತದೆ.

ಹಾಗಾದರೆ ಪರಮೇಶ್ವರನ ಪರಮಾರ್ಥಸ್ವರೂಪವು ಯಾವದು? ಎಂದರೆ, ಯಾವದರಿಂದ ನಮ್ಮ ವಾಙ್ಮನಃಪ್ರಾಣಗಳು ವ್ಯಾಪ್ತನಾಗಿರುವವೋ, ಯಾವದನ್ನು ನಮ್ಮ ವಾಙ್ಮನಃಪ್ರಾಣಗಳು ವ್ಯಾಪಿಸಲಾರವೋ ಅದೇ ಪರಮಾರ್ಥವಾದ ಬ್ರಹ್ಮಸ್ವರೂಪವು. ನಾವು ಉಪಾಸನೆಮಾಡುವದೂ ಬ್ರಹ್ಮದ ರೂಪವೇ ಸರಿ; ಆದರೆ ಅದು ಅದರ ನಿಜವಾದ ರೂಪವಲ್ಲ, ತತ್ಕಾಲಕ್ಕಾಗಿ ನಮ್ಮ ದೃಷ್ಟಿಸೌಕರ್ಯಕ್ಕಾಗಿ ಕಲ್ಪಿತವಾಗಿರುವ ಮಾಯಾರೂಪವದು. ಆದ್ದರಿಂದ ನಾವು ಹೊರಗೆ ನೋಡುವ, ಹೊರಗೆ ಕೇಳುವ, ಹೊರಗೆ ಮುಟ್ಟುವ, ಹೊರಗೆ ಮೂಸುವ

ವಿಷಯವಾಗಿರುವ ರೂಪವೆಲ್ಲ ಕಲ್ಪಿತವಾದ ಮಾಯಿಕವಾದ ಉಪಾಧಿಯ ರೂಪವು. ನಾವು ಯಾವದರ ಬಲದಿಂದ ಅದನ್ನು ನೋಡುವೆವೋ, ಯಾವದರ ಬಲದಿಂದ ಅದನ್ನು ಕೇಳುವೆವೋ, ಯಾವದರ ಬಲದಿಂದ ಅದನ್ನು ಮುಟ್ಟುವೆವೋ ಆ ಚೈತನ್ಯವೇ ಪರಮಾರ್ಥವಾದ ನಿರುಪಾಧಿಕವಾದ ಬ್ರಹ್ಮದ ಸ್ವರೂಪವು.

ಈ ನಿರುಪಾಧಿಕವನ್ನೇ ನಾವು ಬ್ರಹ್ಮವೆಂದು ತಿಳಿದುಕೊಳ್ಳಬೇಕು. ಯಾವದನ್ನು ಕಣ್ಣಿನಿಂದ ಕಾಣುವೆವೋ ಅದು ವಿಷಯವಾದ್ದರಿಂದ ಬ್ರಹ್ಮವಲ್ಲ; ಅದನ್ನು ಯಾವ ಕಣ್ಣಿನಿಂದ ಕಾಣುವೆವೋ ಆ ಕಣ್ಣೂ ವಿಷಯವಾದ್ದರಿಂದ ಬ್ರಹ್ಮವಲ್ಲ; ಯಾವ ಇಂದ್ರಿಯಶಕ್ತಿಯಿಂದ ಕಣ್ಣು ಕಾಣುವದೋ ಅದೂ ಬ್ರಹ್ಮವಲ್ಲ; ಏಕೆಂದರೆ ಆ ಇಂದ್ರಿಯವೂ ಮನಸ್ಸಿಗೆ ವಿಷಯವಾಗಿರುತ್ತದೆ; ಇನ್ನು ಯಾವ ಮನಸ್ಸಿನಿಂದ ಇಂದ್ರಿಯವನ್ನು ಅರಿಯುವೆವೋ ಅದೂ ಬ್ರಹ್ಮವಲ್ಲ, ಏಕೆಂದರೆ ಆ ಮನಸ್ಸೂ ನಮ್ಮ ಚೈತನ್ಯಕ್ಕೆ ವಿಷಯವಾಗಿರುತ್ತದೆ. ಅಂತೂ ಯಾವಯಾವದು 'ಇದು' ಎಂದು ಅರಿಯುವದಕ್ಕೆ ವಿಷಯವಾಗಿರುವದೋ ಅದೊಂದೂ ಬ್ರಹ್ಮವಲ್ಲ. ಹೀಗೆ 'ಇದೂ ಬ್ರಹ್ಮವಲ್ಲ, ಇದೂ ಬ್ರಹ್ಮವಲ್ಲ' ಎಂದು ವಿಷಯವಾದದ್ದನ್ನೆಲ್ಲ ಹೊರಕ್ಕೆ ತಳ್ಳುತ್ತಾ ನಮ್ಮ ಒಳಗೊಳಗೇ ಸರಿದುಕೊಳ್ಳುತ್ತಾಬಂದರೆ ಯಾವದು ಎಲ್ಲವನ್ನೂ ಅರಿಯುವ ನಿತ್ಯವಿಷಯಿಯಾಗಿರುವದೋ ಅದೇ ಬ್ರಹ್ಮದ ನಿಜವಾದ ಸ್ವರೂಪವು. ಯಾವ ಚೈತನ್ಯರೂಪದಿಂದ ಎಲ್ಲವನ್ನೂ ನಾವು ಬೆಳಗುತ್ತಿರುವೆವೋ, ಯಾವ ಚೈತನ್ಯವು ವಾಗಿಂದ್ರಿಯಕ್ಕೆ ವಿಷಯವಾಗದೆ ವಾಕ್ಕನ್ನೇ ವಿಷಯವಾಗಿಸಬಲ್ಲದೋ, ಯಾವದು ಚಕ್ಷುರಾದಿಜ್ಞಾನೇಂದ್ರಿಯಗಳಿಗೊಂದಕ್ಕೂ ಸಿಲುಕದೆ ಅವುಗಳೆಲ್ಲವನ್ನೂ ತನ್ನ ಅಚ್ಚಳಿಯದ ಬೆಳಕಿನಿಂದ ಯಾವಾಗಲೂ ಬೆಳಗುತ್ತಿರುವದೋ, ಯಾವದು ಮನಸ್ಸಿಗೂ ನಿಲುಕದೆ ಮನಸ್ಸನ್ನೂ ತನ್ನ ಬೆಳಗಿನಿಂದ ಬೆಳಗುತ್ತಿರುವದೋ, ಅದೇ ನಮ್ಮ ಆತ್ಮನಾದ ಬ್ರಹ್ಮವು— ಎಂದು ನಿಶ್ಚಯವಾಗುವದು.

ಇಂದ್ರಿಯಾದಿಗಳಲ್ಲಿ ಚೈತನ್ಯವಿಲ್ಲ, ಅರಿವಿಲ್ಲ, ಬೆಳಕಿಲ್ಲ; ಅವುಗಳು ವಿಷಯಗಳನ್ನು ಅರಿಯುವವೆಂಬುದು ಸುಳ್ಳು, ಇಷ್ಟೇ ಅಲ್ಲ, ಇಂದ್ರಿಯಾದಿಗಳಲ್ಲಿರುವದೆಂದು ನಾವು ತಪ್ಪಾಗಿ ತಿಳಿದುಕೊಂಡಿರುವ ಅರಿವಿನ ತಿರುಳು ತಾನು ಯಾವದಕ್ಕೂ ನಿಲುಕದೆ ಎಲ್ಲವನ್ನೂ ಬೆಳಗುತ್ತಾ ತಾನೇತಾನಾಗಿರುವದು. ಅದೇ ಶುದ್ಧ ಚೈತನ್ಯ ಸ್ವರೂಪವಾದ ಬ್ರಹ್ಮವು, ಅದೇ ನಮ್ಮ ಆತ್ಮನು. ಈ ಪ್ರತ್ಯಗಾತ್ಮನಾದ ಬ್ರಹ್ಮವನ್ನು ಬ್ರಹ್ಮವೆಂದು ತಿಳಿಯುವೆವೆಂದು ಹೇಳುವದೂ ಉಪಚಾರದಿಂದಲೇ. ಏಕೆಂದರೆ ಯಾವ ಮನಸ್ಸಿನಿಂದ ಎಲ್ಲವನ್ನೂ ತಿಳಿದು ವಿಚಾರಮಾಡಿ ನಿಶ್ಚಯಿಸುವೆವೆನ್ನುವೆವೋ ಅದರ ನಿಶ್ಚಯವೂ ಆ ಬ್ರಹ್ಮಚೈತನ್ಯದಿಂದಲೇ ಆಗಬೇಕಾಗಿರುತ್ತದೆ. ಇಂಥ ನಿತ್ಯನಿಶ್ಚಿತಸ್ವರೂಪವಾದ ಚೈತನ್ಯವೇ ಬ್ರಹ್ಮವು.

# ೫. ಬ್ರಹ್ಮವು ಜ್ಞಾನಕ್ಕೂ ವಿಷಯವಲ್ಲ

**ಯದಿ ಮನ್ಯಸೇ ಸುವೇದೇತಿ ದಭ್ರಮೇವಾಪಿ ನೂನಂ**
**ತ್ವಂ ವೇತ್ಥ ಬ್ರಹ್ಮಣೋ ರೂಪಮ್ । ಯದಸ್ಯ ತ್ವಂ**
**ಯದಸ್ಯ ದೇವೇಷ್ವಥ ನು ಮೀಮಾಂಸ್ಯಮೇವ ತೇ ಮನ್ಯೇ**
**ವಿದಿತಮ್ ॥ ೧ ॥**

**ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚ ।**
**ಯೋ ನಸ್ತದ್ವೇದ ತದ್ವೇದ ನೋ ನ ವೇದೇತಿ ವೇದ ಚ ॥ ೨ ॥**

**ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ ।**
**ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥ ೩ ॥**

“ **ಗುರು :** ಬ್ರಹ್ಮವನ್ನು ನಾನು ಚೆನ್ನಾಗಿ ಅರಿತುಕೊಂಡಿರುವೆನೆಂದು ಎಣಿಸುವೆಯಾದರೆ ನೀನು ಅರಿತುಕೊಂಡಿರುವೆನೆಂಬ ಬ್ರಹ್ಮದ ರೂಪವು ಆಧ್ಯಾತ್ಮಿಕವೇ ಆಗಲಿ, ಆಧಿದೈವಿಕವೇ ಆಗಲಿ, ಅದು ಅತ್ಯಲ್ಪವಾಗಿರುತ್ತದೆ. ಆದ್ದರಿಂದ ನೀನು ಅರಿತುಕೊಂಡದ್ದು ಇನ್ನೂ ವಿಚಾರಣೀಯವಾಗಿಯೇ ಇರುವದೆಂದು ನನ್ನ ಅಭಿಪ್ರಾಯವು.

**ಶಿಷ್ಯ :** ನಾನು ಚೆನ್ನಾಗಿ ಅರಿತುಕೊಂಡಿರುವೆನೆಂದೂ ಎಣಿಸಿಲ್ಲ ; ಅರಿತಿಲ್ಲವೆಂದೂ ಎಣಿಸಿಲ್ಲ, ಏಕೆಂದರೆ ಅರಿತೂ ಇರುತ್ತೇನೆ. ‘ಅರಿತಿಲ್ಲವೆಂದೂ ಎಣಿಸಿಲ್ಲ. ಅರಿತೂ ಇರುತ್ತೇನೆ’ ಎಂಬಿದನ್ನು ನಮ್ಮಗಳಲ್ಲಿ ಯಾವನು ಬಲ್ಲನೋ ಅವನೇ ನಿಜವನ್ನು ಬಲ್ಲವನು.

ಯಾವನಿಗೆ ಬ್ರಹ್ಮವು ಅಮತವಾಗಿರುವದೋ ಅವನಿಗೇ ಮತವಾಗಿರುವದು ; ಯಾವನಿಗೆ ಮತವಾಗಿರುವದೋ ಅವನು ಅದನ್ನು ಅರಿಯನು. ಅದು ಅರಿತುಕೊಂಡವರಿಗೆ ತಿಳಿದಿರುವದಿಲ್ಲ. ಅರಿಯದವರಿಗೆ ತಿಳಿದಿರುತದೆ. ”

**“ ಅದನ್ನೇ ಬ್ರಹ್ಮವೆಂದು ಅರಿತುಕೊ, ಉಪಾಸ್ಯವಾದದ್ದು ಬ್ರಹ್ಮವಲ್ಲ ” ಎಂಬ ಹಿಂದಿನ ಮಂತ್ರಗಳ ಉಪದೇಶವನ್ನು ಕೇಳಿದವರಿಗೆ ಒಂದು ತಪ್ಪು ಅಭಿಪ್ರಾಯವುಂಟಾಗುವ ಸಂಭವವಿದೆ. ಅದೇನೆಂದರೆ ಬ್ರಹ್ಮವು ಉಪಾಸ್ಯವಲ್ಲ, ಉಪಾಸ್ಯವನ್ನು ಬ್ರಹ್ಮವೆಂದು ತಿಳಿಯುವದು ತಪ್ಪೆಂದು ಶ್ರುತಿಯೇ**

ಹೇಳಿರುತ್ತದೆ; ಆದ್ದರಿಂದ ಉಪಾಸ್ಯರೂಪವನ್ನು ಕೈಬಿಟ್ಟು, ಯಾವದು ವಾಗಾದಿ ಕರ್ಮೇಂದ್ರಿಯಗಳನ್ನೂ ಚಕ್ಷುರಾದಿಜ್ಞಾನೇಂದ್ರಿಯಗಳನ್ನೂ ಮನಸ್ಸನ್ನೂ ಅರಿಯುವ ಚೇತನವಾಗಿರುವದೋ ಆ ಸಾಕ್ಷಿರೂಪವಾದ ಪರಬ್ರಹ್ಮವನ್ನೇ ಅರಿತು ಕೊಳ್ಳಬೇಕು– ಎಂದೂ ಆ ಉಪದೇಶವಾಕ್ಯಕ್ಕೆ ಅರ್ಥವನ್ನು ಮಾಡಿಕೊಳ್ಳು ವದಕ್ಕೆ ಬರುತ್ತದೆ. ಆದರೆ 'ಅದನ್ನೇ ಬ್ರಹ್ಮವೆಂದು ತಿಳಿ' ಎಂಬ ವಾಕ್ಯಕ್ಕೆ ಇದು ಸರಿಯಾದ ಅರ್ಥವಲ್ಲ, ಏಕೆಂದರೆ ಉಪಾಸ್ಯವಾದದ್ದನ್ನು ಬ್ರಹ್ಮವೆಂದು ತಿಳಿಯಬಾರದು– ಎಂದೇ ಅರ್ಥವನ್ನು ಮಾಡುವದಾದರೆ ಶ್ರುತಿಯಲ್ಲಿರುವ ಉಪಾಸನಾವಾಕ್ಯಗಳೆಲ್ಲ ನಿಷ್ಫಲವೆಂದಾಗುತ್ತದೆ ; ಉಪಾಸನೆಗೆ ವಿಷಯವಾಗಿ ಹೇಳಿರುವದೆಲ್ಲ ಅಬ್ರಹ್ಮವೆಂದೇ ಆಗಿಬಿಡುತ್ತದೆ. ಒಂದು ದೃಷ್ಟಿಯಿಂದ ನೋಡಿ ದಾಗ ಕೆಲಕೆಲವು ಉಪಾಸನೆಗಳಲ್ಲಿ ಅಬ್ರಹ್ಮವನ್ನು ಬ್ರಹ್ಮವೆಂದು ಉಪಾಸನೆ ಮಾಡಬೇಕೆಂದು ಹೇಳಿದೆಯೆನ್ನುವದೇನೋ ಸರಿಯಾಗುತ್ತದೆ. ಉದಾಹರಣೆಗೆ ' ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು ', 'ಮನಸ್ಸನ್ನು ಬ್ರಹ್ಮ ವೆಂದು ಉಪಾಸನೆಮಾಡಬೇಕು'– ಎಂದು ಮುಂತಾಗಿ ಹೇಳಿರುವ ಕಡೆಯಲ್ಲಿ ಅಬ್ರಹ್ಮವನ್ನೇ ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ಹೇಳಿರುತ್ತದೆಯೆಂದು ತಿಳಿಸರೂ ಸಾಗುತ್ತದೆ. ಆದರೆ ಎಲ್ಲಾ ಉಪಾಸನೆಗಳಲ್ಲಿಯೂ ಹೀಗೆಯೇ ಇರುವದಿಲ್ಲ, ಉದಾಹರಣೆಗೆ ಸತ್ಯಕಾಮಸತ್ಯಸಂಕಲ್ಪಾದಿಸಕಲಕಲ್ಯಾಣಗುಣ ಗಳಿಂದ ಕೂಡಿದ ಬ್ರಹ್ಮವನ್ನು ನನ್ನ ಆತ್ಮನೆಂದು ಉಪಾಸನೆಮಾಡಬೇಕು' ಎಂದು ಹೇಳಿರುವೆಡೆಯಲ್ಲಿ ಅಬ್ರಹ್ಮವನ್ನು ಉಪಾಸನೆಮಾಡಬೇಕೆಂದು ಹೇಳಿರುವದೇ ಇಲ್ಲ. ಆದ್ದರಿಂದ ಉಪಾಸ್ಯವಾದದ್ದು ಬ್ರಹ್ಮವಲ್ಲ– ಎಂಬುದು ಪ್ರಕೃತವಾಕ್ಯದ ಅರ್ಥವೆನ್ನುವದು ಸರಿಯಲ್ಲ.

ಇದರಂತೆ, 'ಯಾವದು ವಾಙ್ಮನಃಪ್ರಾಣಗಳಿಗೆ ಸಾಕ್ಷಿಯಾಗಿರುವದೋ ಅದನ್ನೇ ಅರಿತುಕೊಳ್ಳಬೇಕು' ಎಂಬುದೂ ಈ ವಾಕ್ಯಕ್ಕೆ ಸರಿಯಾದ ಅರ್ಥ ವಲ್ಲ. ಏಕೆಂದರೆ ವಾಙ್ಮನಃಪ್ರಾಣಗಳಿಗೆ ಸಾಕ್ಷಿಯಾಗಿರುವ ಚೈತನ್ಯವು ನಮ್ಮ ಸ್ವರೂಪವೇ ಆಗಿರುತ್ತದೆ. ಸ್ವರೂಪವು ನಮಗಿಂತ ಬೇರೆಯಲ್ಲ, ಅದನ್ನು ನಾವು ಅರಿತುಕೊಳ್ಳುವೆವೆಂಬುದು ಹೇಗೆ ? ನಮ್ಮ ಸ್ವರೂಪವನ್ನು ನಾವೇ ಅರಿತು ಕೊಳ್ಳಬಹುದೆಂದು ಹೇಳಿದರೆ ಆತ್ಮಾಶ್ರಯವೆಂಬ ದೋಷವು ಬರುತ್ತದೆ ; ಮನುಷ್ಯನು ಸ್ವಲ್ಪ ಅಭ್ಯಾಸಮಾಡಿದರೆ ತನ್ನ ಹೆಗಲಮೇಲೆ ತಾನೇ ಏರಿ ಕುಳಿತು ಕೊಳ್ಳಬಹುದು– ಎಂಬ ಉಪದೇಶಕ್ಕೂ ಈ ವಾಕ್ಯಕ್ಕೂ ಯಾವ ತಾರತಮ್ಯವೂ ಇಲ್ಲದೆಹೋಗುತ್ತದೆ. 'ವಿಜ್ಞಾನವು ತನ್ನನ್ನು ತಾನೇ ಅರಿಯುತ್ತದೆ' ಎಂದು ಹೇಳುವ ವಿಜ್ಞಾನವಾದಿಗಳಾದ ಬೌದ್ಧರ ಮತದಲ್ಲಿ ಈ ದೋಷವುಂಟೆಂದರಿತೇ ವೈದಿಕರೆಲ್ಲರೂ ಆ ಮತವನ್ನು ತಳ್ಳಿಹಾಕಿರುತ್ತಾರೆ. ಹೀಗಿರುವಲ್ಲಿ ನಮ್ಮ

ಆತ್ಮನಾದ ಬ್ರಹ್ಮವನ್ನು ನಾವೇ ಅರಿಯಬೇಕು-ಎಂಬರ್ಥವನ್ನು ಕಲ್ಪಿಸಿದರೆ ಪ್ರಕೃತಶ್ರುತಿಯು ಬೇರೊಂದು ಬಗೆಯಿಂದ ಆ ವಾದವನ್ನೇ ಹೇಳಿದಂತೆ ಆಗುತ್ತದೆ.

ಆದಕಾರಣ ಮೇಲೆ ವರ್ಣಿಸಿರುವದು ಶ್ರುತಿಯ ಅರ್ಥವಲ್ಲ. ಶ್ರುತಿಯ ನಿಜವಾದ ಅಭಿಪ್ರಾಯವೇನೆಂದರೆ: ನಮ್ಮೊಳಗೆ ಕಾಣಬರುವ ಮನಸ್ಸೇ ಮುಂತಾದವುಗಳನ್ನು ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ಆಧ್ಯಾತ್ಮಿಕವಾಗಿ ಹೇಳಲಿ ನಮ್ಮ ಹೊರಗಿರುವ ಆದಿತ್ಯ, ಆಕಾಶ- ಮುಂತಾದವುಗಳನ್ನು ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ಆಧಿದೈವಿಕವಾಗಿ ಹೇಳಲಿ, ಬ್ರಹ್ಮದ ನಿಜವಾದ ಸ್ವರೂಪವು ಆಯಾ ಉಪಾಧಿಗೆ ತಕ್ಕಷ್ಟೇ ಎಂತ ಎಂದಿಗೂ ತಿಳಿಯಬಾರದು. ಹಾಗೆ ತಿಳಿದರೆ ಅದು ಆಳತೆಯ ಬ್ರಹ್ಮವಾಗುತ್ತದೆ. ಅರಸನ ಚಿತ್ರವೊಂದನ್ನು ನೋಡಿ ಅರಸನು ಆ ಚಿತ್ರದ ಚೌಕಟ್ಟಿನೊಳಗೆ ಅಡಕವಾಗಿರುವನೆಂದು ತಿಳಿಯುವದು ಎಷ್ಟು ಮೂಢತನವೋ, ಉಪಾಸ್ಯವಾಗಿರುವ ಬ್ರಹ್ಮವು ತನ್ನ ಉಪಾಧಿಯ ಸುತ್ತುವಳಿಯದಲ್ಲಿ ಅಡಕವಾಗಿರುವದೆಂದು ತಿಳಿಯುವದೂ ಅಷ್ಟೇ ಮೂಢತನವಾಗಿರುತ್ತದೆ. ಹೀಗೆಯೇ ನಮ್ಮೊಳಗಿರುವ ವಾಙ್ಮನಃಪ್ರಾಣಗಳ ಸಾಕ್ಷಿಯಾದ ನಮ್ಮ ಸ್ವರೂಪವನ್ನು ನಾವು ವಿಷಯವಾಗಿ ಅರಿತುಕೊಳ್ಳಬಹುದೆಂದು ತಿಳಿಯುವದೂ ಸರಿಯಲ್ಲ; ಹಾಗೆ ತಿಳಿಯುವದು ನಮ್ಮನ್ನೇ ನಾವು ಎದುರಿಗೆ ನಿಲ್ಲಿಸಿಕೊಂಡು ನೋಡಬಹುದೆಂದೆಣಿಸುವಷ್ಟು ನಗೆಗೀಡಾದ ಭಾವನೆಯಾಗಿರುತ್ತದೆ.

ಹಾಗಾದರೆ ಬ್ರಹ್ಮವನ್ನು ಅರಿತುಕೊಳ್ಳುವದು ಹೇಗೆ? ಹೊರಗಿನ ಉಪಾಸ್ಯವನ್ನೂ ಒಳಗಿನ ಸಾಕ್ಷಿರೂಪವನ್ನೂ ನಾವು ನಿಜವಾಗಿ ಅರಿಯುವದಕ್ಕಾಗದಿದ್ದರೆ ಬ್ರಹ್ಮವನ್ನು ಅರಿತುಕೊಳ್ಳಬೇಕೆಂಬ ಉಪದೇಶಕ್ಕಾದರೂ ಏನರ್ಥ ?- ಎಂದು ಯಾರಾದರೂ ಕೇಳಬಹುದು. ಇದಕ್ಕೆ ಉತ್ತರವೇನೆಂದರೆ : 'ಇದು' ಎಂದು ವಿಷಯೀಕರಿಸಿ ಯಾವಯಾವದನ್ನು ಅರಿಯುವೆವೋ ಅದೊಂದೂ ಬ್ರಹ್ಮದ ನಿಜವಾದ ಸ್ವರೂಪವಲ್ಲ; ಅದು ಉಪಾಸ್ಯವಾಗಿರಲಿ, ಜ್ಞೇಯವಾಗಿರಲಿ, 'ನನ್ನ ಉಪಾಸನೆಗೆ ಇದು ವಿಷಯವಾಗಿರುವದು', 'ನನ್ನ ಜ್ಞಾನಕ್ಕೆ ಇದು ವಿಷಯವಾಗಿರುವದು'-ಎಂದೆಣಿಸುವದೇ ತಪ್ಪುಕಲ್ಪನೆಯು. 'ಇದು' ಎಂದು ವಿಷಯವಾಗಿ ತೋರುವದೆಲ್ಲವೂ ಕಲ್ಪಿತವಾದದ್ದು. ಈ ಕಲ್ಪನೆಗೆ ಆಧಾರವಾಗಿ, ಒಳಗು ಹೊರಗೆಂಬ ಭೇದವಾಗಲಿ ಉಪಾಸ್ಯಜ್ಞೇಯವೆಂಬ ಭೇದವಾಗಲಿ ಇಲ್ಲದ ಅದ್ವಿತೀಯಚೈತನ್ಯವೇ ಬ್ರಹ್ಮವು. ಆ ಬ್ರಹ್ಮವೇ ನಮ್ಮಗಳೆಲ್ಲರ ಆತ್ಮನು. ಹೀಗೆಂದು ವಿಷಯವಾಗಿ ಅರಿಯದೆ ಅರಿತುಕೊಳ್ಳುವದೇ ಬ್ರಹ್ಮಜ್ಞಾನವು. ನಿಜವಾದ ಬ್ರಹ್ಮಜ್ಞಾನಿಯ ಕಲ್ಪನೆಯು ಹೇಗಿರುವದೆಂದರೆ, ಅವನು ನಾನು ಬ್ರಹ್ಮವನ್ನು ಅರಿತುಕೊಂಡಿರುವೆನೆಂದೂ ತಿಳಿಯುವದಿಲ್ಲ, ಅದನ್ನು ನಾನು ಅರಿ

ತಿಲ್ಲವೆಂಬೂ ತಿಳಿಯುವದಿಲ್ಲ; ಅರಿತುಕೊಳ್ಳತಕ್ಕದ್ದು, ಅರಿಯುವದಕ್ಕಾಗದ್ದು- ಎಂಬೀ ಎರಡಕ್ಕಿಂತಲೂ ಬೇರೆಯಾಗಿರುವ ನನ್ನ ಆತ್ಮನೇ ಬ್ರಹ್ಮವು- ಎಂಬ ಅರಿವು ಅವನಲ್ಲಿ ಅಚ್ಚಳಿಯದೆ ಇದ್ದುಕೊಂಡಿರುತ್ತದೆ. ಹೀಗೆ ಅರಿವು ಪರವೆಗಳಿಗೆ ಸಾಕ್ಷಿಯಾದ ಬ್ರಹ್ಮಚೈತನ್ಯವೇ ತಾನೆಂಬ ಅರಿವೇ ಬ್ರಹ್ಮದ ಅರಿವು. ಬೆಂಕಿಗೂ ಬಿಸಿಗೂ ಭೇದವಿಲ್ಲದಿರುವಂತೆ ಆ ಅರಿವು ಬ್ರಹ್ಮಚೈತನ್ಯಸ್ವರೂಪವಾದ ಬರಿಯ ಅರಿವೇ ಆಗಿರುವದೆಂಬುದನ್ನು ಬ್ರಹ್ಮಜ್ಞಾನಿಯೊಬ್ಬನೇ ಬಲ್ಲವನಾಗಿರುವನು.

ಇದುವರೆಗಿನ ವಿಚಾರದಿಂದ ಏನು ಗೊತ್ತಾಯಿತೆಂದರೆ, ಯಾವನು ಬ್ರಹ್ಮವನ್ನು ಧ್ಯಾನಕ್ಕಾಗಲಿ ಜ್ಞಾನಕ್ಕಾಗಲಿ ವಿಷಯವಾಗಿ ಮಾಡಿಕೊಂಡು ಇಷ್ಟೇ ಎಂದು ಅಳತೆಮಾಡಿದಂತೆ ಅದನ್ನರಿಯುವದಕ್ಕೆ ಹವಣಿಸುವನೋ ಅವನು ಅರಿತಿರುವದು ಬ್ರಹ್ಮದ ಆಧ್ಯಾತ್ಮಿಕರೂಪವಾಗಿರಲಿ, ಆಧಿದೈವಿಕರೂಪವಾಗಿರಲಿ, ಅದು ಪರಿಚ್ಛಿನ್ನವಾದ ಅಲ್ಪರೂಪವಾಗಿರುತ್ತದೆ; ಅದು ಬ್ರಹ್ಮದ ಪರಮಾರ್ಥ ಸ್ವರೂಪವಲ್ಲವೇ ಅಲ್ಲ. ಅವನು ಇನ್ನೂ ಬ್ರಹ್ಮಜಿಜ್ಞಾಸುವೇ ಹೊರತು ಬ್ರಹ್ಮಜ್ಞಾನಿಯಲ್ಲ.

ಆತ್ಮಸ್ವರೂಪವಾಗಿರುವ ಬ್ರಹ್ಮವನ್ನು ಶ್ರವಣಮನನವಿಜ್ಞಾನಗಳಿಂದ ಕಂಡುಕೊಳ್ಳಬೇಕೆಂದು ಶ್ರುತಿಯಲ್ಲಿ ಹೇಳಿರುವದುಂಟು. ಹಾಗೆ ಹೇಳಿರುವದು ಅಜ್ಞರಾದ ಸಾಧಕರ ವ್ಯಾವಹಾರಿಕದೃಷ್ಟಿಯಿಂದಲೇ ಹೊರತು, ಬ್ರಹ್ಮವು ನಿಜವಾಗಿಯೂ ಶ್ರವಣಮನನವಿಜ್ಞಾನಗಳಿಗೆ ವಿಷಯವೆಂಬ ಅಭಿಪ್ರಾಯದಿಂದ ಹೇಳಿದ್ದಲ್ಲ. ಬ್ರಹ್ಮವು ನಿಜವಾಗಿ ಶ್ರೋತವ್ಯವಲ್ಲ, ಮಂತವ್ಯವಲ್ಲ, ವಿಜ್ಞಾತವ್ಯವೂ ಅಲ್ಲ. ಅದು ಶ್ರವಣವನ್ನು ಮಾಡುವವನ ಶ್ರೋತ್ರಕ್ಕೂ ಶ್ರೋತ್ರವಾಗಿ, ಮನನ ಮಾಡುವವನ ಮನನವನ್ನೂ ಮನನಮಾಡುವದಾಗಿ, ವಿಜ್ಞಾನದಿಂದ ಅರಿತು ಕೊಳ್ಳುವೆನೆಂಬವನ ವಿಜ್ಞಾನದ ತಿರುಳೇ ಆಗಿ, ಸಾಧಕನ ನಿತ್ಯಸಿದ್ಧವಾದ ಸ್ವರೂಪವೇ ಆಗಿರುತ್ತದೆ. ಯಾವ ಜಿಜ್ಞಾಸುವು ವೇದಾಂತಶ್ರವಣವನ್ನು ಮಾಡಿ ಸದ್ಗುರುವಿನ ಅನುಗ್ರಹದಿಂದ ಮನನವನ್ನು ಮಾಡಿ ತನ್ನ ವಿಜ್ಞಾನದಿಂದ ಈ ಗುಟ್ಟನ್ನರಿತುಕೊಳ್ಳುವನೋ, ಅವನೇ ಬ್ರಹ್ಮಾತ್ಮಸ್ವರೂಪವನ್ನು ಬಲ್ಲ ಜ್ಞಾನಿ ಯೆನಿಸುವನು. ಮಿಕ್ಕವರು ಆತ್ಮನನ್ನು ಶ್ರವಣಾದಿಗಳಿಂದ ಕಂಡುಕೊಳ್ಳಬೇಕೆಂದು ಯಾವಾಗಲೂ ಹವಣಿಸುತ್ತಿದ್ದರೂ ಅವರಿಗೆ ಆತ್ಮನು ಶ್ರುತನೂ ಆಗದೆ, ಮತನೂ ಆಗದೆ, ವಿಜ್ಞಾತನೂ ಆಗದೆ ಎಂದೆಂದಿಗೂ ಅತ್ಯಂತದೂರವಾಗಿರುತ್ತಾನೆ. ಆದ್ದರಿಂದ ಬ್ರಹ್ಮವನ್ನು ಸರಿಯಾಗಿ ಅರಿತುಕೊಳ್ಳಬೇಕೆಂಬ ಹಂಬಲಿದ್ದವರು ಅದು ನಮ್ಮ ಬರಿಯ ವೃತ್ತಿಗಳಿಗೆ ಗೋಚರವಾದೀತೆಂಬ ಆಶೆಯನ್ನು ಮೊದಲು ಬಿಡಬೇಕು, ಅರಿಯುವ ನಮ್ಮ ಆತ್ಮನೇ ಅದು-ಎಂದು ನಿಶ್ಚಯಿಸಿಕೊಳ್ಳಬೇಕು.

# ೬. ಬ್ರಹ್ಮವನ್ನು ಅರಿತುಕೊಳ್ಳುವದು ಹೇಗೆ?

**ಪ್ರತಿಬೋಧವಿದಿತಂ ಮತಮಮೃತತ್ವಂ ಹಿ ವಿನ್ದತೇ ।**
**ಆತ್ಮನಾ ವಿನ್ದತೇ ವೀರ್ಯಂ ವಿದ್ಯಯಾ ವಿನ್ದತೇಽಮೃತಮ್ ॥೪॥**

"ಒಂದೊಂದು ಅರಿವಿನಿಂದಲೂ ತಿಳಿದರೆ ಸರಿಯಾಗಿ ತಿಳಿದಂತಾಯಿತು, ಏಕೆಂದರೆ ಆಗ ಅಮೃತತ್ವವನ್ನು ಹೊಂದುತ್ತಾನೆ. ಆತ್ಮನಿಂದ ವೀರ್ಯವನ್ನು ಹೊಂದುತ್ತಾನೆ, ವಿದ್ಯೆಯಿಂದ ಅಮೃತತ್ವವನ್ನು ಹೊಂದುತ್ತಾನೆ."

ಬ್ರಹ್ಮವನ್ನು ಧ್ಯಾನದ ಬಲೆಗಾಗಲಿ ಪ್ರತ್ಯಯದ ಬಲೆಗಾಗಲಿ ಸಿಕ್ಕಿಸಿಕೊಂಡು ಅರಿಯಬಹುದೆಂದು ಭಾವಿಸುವದು ನಿಜವಾದ ಅರಿವಿನ ಹಾದಿಯಲ್ಲ. ಬ್ರಹ್ಮವು ಮತವಾಗುವದೆಂದು ಎಣಿಸುವದು ನಿಜವಾದ ಮನನವಲ್ಲ, ಬ್ರಹ್ಮವನ್ನು ಅರಿಯಬಹುದೆಂದು ಎಣಿಸುವದು ನಿಜವಾದ ವಿಜ್ಞಾನವಲ್ಲ– ಎಂದು ಹಿಂದೆ ಹೇಳಿದ್ದಾಗಿದೆಯಷ್ಟೆ. ಹಾಗಾದರೆ ಬ್ರಹ್ಮದ ನಿಜವಾದ ಮನನವು ಹೇಗೆ? ಅದರ ನಿಜವಾದ ವಿಜ್ಞಾನವು ಹೇಗೆ? ವಿಷಯವಾಗಿಸಿಕೊಳ್ಳದೆ ಅದನ್ನು ಮನನಮಾಡುವದಾಗಲಿ ಅರಿತುಕೊಳ್ಳುವದಾಗಲಿ ಹೇಗೆ ಆದೀತು?– ಎಂಬ ಶಂಕೆಯುಂಟಾಗುವದು ಸ್ವಾಭಾವಿಕವಾಗಿದೆ. ಮತ್ತು 'ಬ್ರಹ್ಮವು ಅರಿತವರಿಗೆ ತಿಳಿದಿರುವದಿಲ್ಲ'– ಎಂದು ಹೇಳಿತ್ತು. ಅರಿತವರಿಗೂ ಅದು ತಿಳಿದಿರುವದಿಲ್ಲವಾದರೆ ಅದು ಯಾರಿಗೂ ಗೊತ್ತಾಗುವಂತೆಯೇ ಇಲ್ಲವೆಂದಾಯಿತಲ್ಲ! ಆಗ ಗುರುವಿನ ಅಥವಾ ಶಾಸ್ತ್ರದ ವಚನಕ್ಕೇನು ಬೆಲೆ?–ಎಂಬ ಶಂಕೆಯೂ ಏಳುತ್ತದೆ. ಇದರಂತೆ 'ಅರಿಯದವರಿಗೆ ಅದು ತಿಳಿದಿರುತ್ತದೆ' ಎಂಬ ಮಾತಂತೂ 'ಬಂಜೆಗೆ ಮಕ್ಕಳುಂಟು' ಎಂಬ ಮಾತಿನಷ್ಟು ಹಾಸ್ಯಾಸ್ಪದವಾಗಿರುತ್ತದೆಯಲ್ಲ!– ಎಂಬ ಆಕ್ಷೇಪವೂ ತಲೆದೋರುತ್ತದೆ. ಈ ಎಲ್ಲಾ ಬಗೆಯ ಶಂಕೆಗಳಿಗೂ ಸಮಾಧಾನವನ್ನು ಹೇಳುವದಕ್ಕೆ ಈ ಮಂತ್ರವು ಹೊರಟಿರುತ್ತದೆ.

ಬ್ರಹ್ಮವು ಅರಿತವರಿಗೆ ತಿಳಿದಿರುವದಿಲ್ಲ– ಎಂದರೆ ಅದನ್ನು ವಿಷಯವಾಗಿ ತಿಳಿದುಕೊಂಡವರಿಗೆ ಅದು ಗೊತ್ತಾಗಿರುವದಿಲ್ಲ ಎಂದು ಅಭಿಪ್ರಾಯ; 'ಅರಿಯದವರಿಗೆ ತಿಳಿದಿರುತ್ತದೆ' ಎಂದರೆ ವಿಷಯವಾಗಿಸಿಕೊಳ್ಳದೆ ಅದನ್ನು ನಮ್ಮ ಆತ್ಮನೆಂದು ಯಾರು ಕಂಡುಕೊಳ್ಳುವರೋ ಅವರಿಗೆ ನಿಜವಾದ ಅದರ ಅರಿವು ಆಗಿರುತ್ತದೆ– ಎಂದು ಅಭಿಪ್ರಾಯ. ಇದನ್ನು ಹಿಂದಿನ ಮಂತ್ರದ ವಿವರಣೆಯಲ್ಲಿಯೇ ತಿಳಿಸಿ ಹೇಳಿರುತ್ತೇವೆ. ಆದ್ದರಿಂದ ಇಲ್ಲಿ ಶಾಸ್ತ್ರಗುರುವಚನಕ್ಕೆ ವೈಯರ್ಥ್ಯವನ್ನಾಗಲಿ ಅಥವಾ ಮಂತ್ರಕ್ಕೆ ವಿರುದ್ಧಾಭಿಪ್ರಾಯವನ್ನಾಗಲಿ ಕಲ್ಪಿಸಿ

ಕೊಳ್ಳುವದಕ್ಕೆ ಅವಕಾಶವಿಲ್ಲ. ಈಗ ಇನ್ನೊಂದು ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವದು ಮಾತ್ರ ಉಳಿಯಿತು. ವಿಷಯವಾಗಿಸಿಕೊಳ್ಳದೆ ಬ್ರಹ್ಮವನ್ನು ಅರಿಯುವದು ಹೇಗೆ ಸಾಧ್ಯವಾದೀತು?– ಎಂಬುದೇ ಆ ಪ್ರಶ್ನೆ. ಇದರ ಉತ್ತರ ವನ್ನು ಸ್ಫುಟವಾಗಿ ಈ ಮಂತ್ರದಲ್ಲಿ ಕಂಡುಕೊಳ್ಳಬಹುದಾಗಿರುತ್ತದೆ.

ಬ್ರಹ್ಮವನ್ನು ಒಂದೊಂದು ಅರಿವಿನ ಮೂಲಕವೂ ಅರಿತುಕೊಳ್ಳ ಬೇಕು : ಆಗ ಬ್ರಹ್ಮದ ಸರಿಯಾದ ಮನನವೂ ವಿಜ್ಞಾನವೂ ಕೈವಶವಾದಂ ತಾಗುತ್ತದೆ. ಅರಿವಿನ ಮೂಲಕವಾಗಿ ಅರಿತುಕೊಳ್ಳಬೇಕೆಂದರೇನೆಂಬುದನ್ನು ತಿಳಿಯುವ ಮುಂಚೆ ಈ ವಾಕ್ಯಕ್ಕೆ ಯಾವಯಾವ ಅರ್ಥವನ್ನು ಮಾಡಬಾರ ದೆಂಬುದನ್ನು ನಿರ್ಧರಿಸಿಕೊಳ್ಳಬೇಕು. ಏಕೆಂದರೆ ಕೆಲವರು ಅರಿವಿನ ಮೂಲಕ ಅರಿತುಕೊಳ್ಳುವದೆಂದರೆ ಅರಿಯುವಾತನೇ ತಾನೆಂದು ತಿಳಿದುಕೊಳ್ಳುವದು ಎಂದು ಅರ್ಥಮಾಡುತ್ತಾರೆ. 'ಕೊಂಬೆಯನ್ನು ಅಲುಗಾಡಿಸುವದೇ ವಾಯುವು' ಎನ್ನು ವಾಗ ಅಲುಗಾಡುವಿಕೆಯೆಂಬ ಕ್ರಿಯೆಯಿಂದ ಅಲುಗಾಡಿಸುವ ವಾಯುವನ್ನು ಊಹಿಸುವಂತೆ ಅರಿಯುವಿಕೆಯೆಂಬ ಕ್ರಿಯೆಯಿಂದ ಅರಿಯುವ ಆತ್ಮನನ್ನು ಊಹಿಸಬೇಕೆಂದು ಅವರ ಅಭಿಪ್ರಾಯ. ಈ ಅಭಿಪ್ರಾಯದಲ್ಲಿರುವ ಒಂದು ದೋಷವೇನೆಂದರೆ : ದೃಷ್ಟಾಂತದಲ್ಲಿ ವಾಯುವು ಒಂದು ಸಲ ಅಲುಗಾಡಿಸುತ್ತದೆ, ಒಂದು ಸಲ ಅಲುಗಾಡಿಸುವದಿಲ್ಲ; ಇದರಂತೆ ದಾರ್ಷ್ಟಾಂತಿಕದಲ್ಲಿಯೂ ಅರಿ ಯುವಿಕೆ ಎಂಬ ಕ್ರಿಯೆಯು ಆತ್ಮನಲ್ಲಿದ್ದುಕೊಂಡಿದ್ದು ಸಮಯಬಂದಾಗ ಹೊರ ತೋರಿಕೊಳ್ಳುವದೆಂತಲೂ ಈ ಅರಿಯುವ ಶಕ್ತಿಗಿಂತ ಬೇರೆಯಾಗಿ ಆತ್ಮನಲ್ಲಿ ಮತ್ತೆಯಾವ ಅರಿವೂ ಇಲ್ಲವೆಂದೂ ಅರ್ಥವಾಗಿಬಿಡುತ್ತದೆ. ಅದನ್ನು ಒಪ್ಪಿದರೆ ಆತ್ಮನಲ್ಲಿ ಅರಿವೆಂಬ ವಿಶೇಷವು ಒಂದು ಕಾಲದಲ್ಲಿ ತೋರಿಕೊಂಡು ಹೋಗಿ ಬಿಡುವದೆಂದೂ ಆತ್ಮನು ಆ ವಿಶೇಷದಿಂದ ಮಾರ್ಪಡುವ ಸ್ವಭಾವವುಳ್ಳವನೆಂದೂ ಆಗಿಬಿಡುತ್ತದೆ. ಮಾರ್ಪಡುವದೆಲ್ಲವೂ ಅನಿತ್ಯವಾಗಿರಬೇಕಾದ್ದರಿಂದ ಅನಿತ್ಯನಾದ ಜೀವನಿಗೆ ನಿತ್ಯವಾದ ಮೋಕ್ಷದಿಂದ ಆಗಬೇಕಾದದ್ದು ಏನೂ ಇಲ್ಲವೆಂದಾಗಿ ಗುರುಶಾಸ್ತ್ರೋಪದೇಶವೆಲ್ಲವೂ ವ್ಯರ್ಥವೆಂದಾಗಿಬಿಡುತ್ತದೆ.

ಈ ಅರ್ಥವನ್ನು ಬಿಟ್ಟು ಅರಿವೆಂಬುದು ದಾಸವಾಳದ ಹೂವಿನಲ್ಲಿ ಕಾಣುವ ಕೆಂಪುಬಣ್ಣದಂತೆ ಆತ್ಮನ ಒಂದಾನೊಂದು ಗುಣವೆಂದು ಹೇಳಿದರೂ ಈ ದೋಷದಿಂದ ಪಾರಾಗುವದಕ್ಕೆ ಆಗುವದಿಲ್ಲ. ಏಕೆಂದರೆ ಈ ಅರಿವಿನ ಗುಣವು ತಾರ್ಕಿಕರು ಹೇಳುವಂತೆ ಆತ್ಮಮನಸ್ಸುಗಳ ಸಂಬಂಧದಿಂದುಂಟಾಗಿ ಆತ್ಮನಿಗೆ ಅಂಟಿಕೊಂಡಿರುವದೆಂದು ಹೇಳಿದರೆ ಅದು ಆತ್ಮನನ್ನು ಬಿಟ್ಟು ಅಗಲಲೂಬಹು ದೆಂದು ಒಪ್ಪಬೇಕಾಗಿರುತ್ತದೆ. ಆಗ ಆತ್ಮನು ಸ್ವತಃ ಜಡಸ್ವರೂಪನೇ ಎಂದೂ ಆಗಿಬಿಡುತ್ತದೆ. ಈ ಸಂಕಟದಿಂದ ದೂರವಾಗಿರುವದಕ್ಕೆಂದು ಕೆಲವರು ಹೀಗೆ

ಹೇಳುವದುಂಟು; 'ಸೂರ್ಯಮಂಡಲವೂ ಅದರ ಬೆಳಕೂ ಎರಡೂ ತೇಜೋದ್ರವ್ಯವೇ ಆಗಿರುವಂತೆ ಆತ್ಮನ ಸ್ವರೂಪವೂ ಅವನ ಧರ್ಮವಾದ ಅರಿವೂ ಎರಡು ಅರಿವೇ; ಆದ್ದರಿಂದ ತಾರ್ಕಿಕರ ಮತದಲ್ಲಿ ಹೇಳಿದ ದೋಷವು ನಮ್ಮ ಪಕ್ಷದಲ್ಲಿ ಬರುವದಿಲ್ಲ.' ಆದರೆ ಈ ಅಭಿಪ್ರಾಯದಲ್ಲಿಯೂ ಆತ್ಮನಿಗೆ ಅನಿತ್ಯತ್ವವು ಕಟ್ಟಿಟ್ಟಬುತ್ತಿಯಾಗುತ್ತದೆ. ಏಕೆಂದರೆ ಸೂರ್ಯಮಂಡಲವೆಂಬುದು ತೇಜಸ್ಸಿನ ರಾಶಿಯಾಗಿದ್ದುಕೊಂಡೇ ತನ್ನ ಕಿರಣಗಳನ್ನು ಎಲ್ಲಾ ಕಡೆಗೂ ಹರಡುತ್ತಿರುವದೆಂಬುದು ಭೌತಿಕವಿಜ್ಞಾನಶಾಸ್ತ್ರಜ್ಞರ ಮತವಾಗಿರುತ್ತದೆ. ಆದ್ದರಿಂದ ಆ ಮಂಡಲವೂ ಮೆಲ್ಲಮೆಲ್ಲಗೆ ಸವೆಯುತ್ತಲೂ ಬಿಸಿಯಲ್ಲಿ ಕಡಿಮೆಯಾಗುತ್ತಲೂ ಬರುತ್ತಿದೆಯೆಂದು ಹೇಳಬೇಕಾಗುತ್ತದೆ, ಈ ದೃಷ್ಟಾಂತದಂತೆಯೇ ಆತ್ಮನೂ ಅವನಚೈತನ್ಯರೂಪವಾದ ಗುಣವೂ ಸಾವಯವವಾಗಿರುವದೆಂದೂ ಬರುಬರುತ್ತಾ ಕಡಿಮೆಯಾಗಿಹೋಗುವದೆಂದೂ ಹೇಳಬೇಕಾಗುತ್ತದೆ. ಆಗ ಒಂದಿಲ್ಲದಿದ್ದರೆ ಒಂದು ದಿನ ಆತ್ಮನು ಇಲ್ಲವಾಗಬೇಕಾಗುತ್ತದೆ.

ಆದ್ದರಿಂದ ಮೇಲೆ ಹೇಳಿದ ವಾಕ್ಯಗಳಿಗೆ ಅರ್ಥವು ಆತ್ಮನು ಅರಿಯುವಾತನೆಂದಾಗಲಿ ಅರಿವೆಂಬ ಗುಣವುಳ್ಳಾತನೆಂದಾಗಲಿ ಅಲ್ಲ; ಮತ್ತೇನೆಂದರೆ ಅರಿವಿನ ತಿರುಳೇ ಆತನು, ಆತನ ಅರಿವಿನಿಂದಲೇ ಅಂತಃಕರಣದ ಪ್ರತ್ಯಯಗಳೂ ಅರಿವೆಂಬ ಹೆಸರನ್ನು ಪಡೆಯುತ್ತಿವೆ ಎಂಬುದೇ ಅದರ ಅಭಿಪ್ರಾಯವು. ಯಾವ ಯಾವ ಅರಿವೆಂಬ ಅಂತಃಕರಣದ ಪ್ರತ್ಯಯವು ಉಂಟಾದರೂ ಆತ್ಮನ ನಿಜವಾದ ಅರಿವು ಆಯಾ ಪ್ರತ್ಯಯವನ್ನು ಬೆಳಗುತ್ತಲೇ ಇರುವದು; ಆ ಆತ್ಮನ ಬೆಳಕಿನಿಂದಲೇ ಪ್ರತ್ಯಯವು ಬೆಳಗುತ್ತಾ ತನ್ನತನ್ನ ವಿಷಯವನ್ನೂ ಬೆಳಗಿಸುತ್ತಿರುವದು ಬೆಂಕಿಯಿಂದ ಕಾದ ಕಬ್ಬಿಣವು ತಾನೂ ಬಿಸಿಯಾಗುವದಲ್ಲದೆ ತನ್ನನ್ನು ಸೋಕಿದ ವಸ್ತುವನ್ನೂ ಸುಡುತ್ತದೆ ಎಂಬ ವ್ಯವಹಾರಕ್ಕೆ ವಿಷಯವಾಗುವಂತೆಯೇ ಅಂತಃಕರಣದ ಪ್ರತ್ಯಯವೂ ಆತ್ಮಚೈತನ್ಯದ ಬೆಳಕಿನಿಂದ ತಾನೂ ಬೆಳಗುತ್ತದೆ, ವಿಷಯಗಳನ್ನೂ ಬೆಳಗುತ್ತದೆ. ಅಲ್ಲಿ ನಿಜವಾಗಿ ಬೆಳಗುವದು ಆತ್ಮಚೈತನ್ಯವೇ. ಪ್ರತ್ಯಯಗಳು ಉಂಟಾಗುವದಕ್ಕೆ ಮೊದಲು, ಅವು ಉಂಟಾದಾಗ, ಮತ್ತು ಅವು ಪೈಗರೆದ ಮೇಲೆ– ಈ ಮೂರು ಸ್ಥಿತಿಯನ್ನೂ ತನ್ನಲ್ಲಿ ಯಾವದೊಂದು ಮಾರ್ಪಾಡೂ ಇಲ್ಲದೆಯೇ ಯಾವದು ಬೆಳಗುತ್ತಿರುವದೋ ಅದೇ ನಮ್ಮಗಳ ಆತ್ಮನಾದ ಬ್ರಹ್ಮವು. ಅದೇ ಅಂತಃಕರಣದಲ್ಲಿ ತೋರುವ ಬೆಳಕಿನ ತಿರುಳು. ಅದು ಪ್ರತ್ಯಯಗಳಿಲ್ಲದಾಗ ಬಡಕಲಾಗಿರುವದಿಲ್ಲ, ಅವು ತೋರಿಕೊಂಡಾಗ ಉಬ್ಬಿಕೊಳ್ಳುವದಿಲ್ಲ, ಆದ್ದರಿಂದ ಅದು ಅವಿಕಾರಿಯು, ಶುದ್ಧವಾದದ್ದು, ಪ್ರತ್ಯಯಗಳಿಗೂ ವಿಷಯಗಳಿಗೂ ಸಾರವು, ಅವುಗಳೆಲ್ಲದರ ಆತ್ಮನು. ಅದನ್ನು ಇದೆಯೆಂದಾಗಲಿ ಇಲ್ಲವೆಂದಾಗಲಿ ಅರಿಯುವದಕ್ಕೆ ಆಗುವದಿಲ್ಲ; ಏಕೆಂದರೆ ಇದೇ

ಇಲ್ಲ–ಎಂಬ ಪ್ರತ್ಯಯಗಳನ್ನು ಎಡೆಬಿಡದೆ ಒಂದೇ ರೂಪದಿಂದಿದ್ದುಕೊಂಡು ಅರಿಯುತ್ತಿರುವ ಬರಿಯರಿವೇ ಅದು. ಇದನ್ನೇ ಸಾಕ್ಷಿಚೈತನ್ಯವು ಎನ್ನುತ್ತಾರೆ.

ಹೀಗೆ ಹುಟ್ಟುಹೊಂದುಗಳಿಲ್ಲದೆ ಇರುವ ಅಮೃತಸ್ವರೂಪವಾದ ಸಕಲ ಪ್ರತ್ಯಯಗಳ ತಿರುಳಾಗಿರುವ ಬರಿಯರಿವೇ ತಾನು ಎಂದು ಪ್ರತ್ಯಯಗಳ ಮೂಲಕ ತಿಳಿದುಕೊಂಡವನು ತಾನೂ ಅಮೃತನಾಗುತ್ತಾನೆ; ಅವನಿಗೆ ಎಂದಿಗೂ ಹುಟ್ಟುಹೊಂದುಗಳಾಗುವದಾಗಿರುವದಿಲ್ಲ. ಹೀಗೆ ಪ್ರತಿಬೋಧದಿಂದ ಎಂದರೆ ಒಂದೊಂದು ಪ್ರತ್ಯಯದಮೂಲಕವೂ ಅದರ ಬೆಳಕಾಗಿರುವ ಸಾಕ್ಷಿಚೈತನ್ಯವೇ ತಾನೆಂದು ತಿಳಿಯುವದೇ ಸರಿಯಾದ ಮನನವು. ಆ ಸಾಕ್ಷಿಚೈತನ್ಯದಲ್ಲಿ ನಿಲು ಗಡೆಯನ್ನು ಹೊಂದುವದೇ ಸರಿಯಾದ ವಿಜ್ಞಾನವು. ಏಕೆಂದರೆ ಪ್ರತ್ಯಯಗಳ ಮೂಲಕ ವಿಷಯವನ್ನು ಅರಿಯುವಾಗ ಪ್ರತ್ಯಯಗಳಿಗೆ ಮೃತಿಯಿರುವದರಿಂದ ಆ ಮೂಲಕ ತಾನೂ ಮೃತಿಯನ್ನು ಹೊಂದಿ ಮರ್ತ್ಯನೆನಿಸಿಕೊಳ್ಳುತ್ತಾನೆ. ಆದರೆ ತನ್ನ ಕೂಟಸ್ಥಚೈತನ್ಯರೂಪದಿಂದ ಪ್ರತ್ಯಯಗಳನ್ನೇ ಯಾವಾಗಲೂ ಬೆಳಗುತ್ತಿರುವೆನೆಂಬುದನ್ನು ಕಂಡುಕೊಂಡಾಗ ಮೃತಿಯನ್ನೈದುತ್ತಿರುವ ಪ್ರತ್ಯಯಗಳಿಂದ ದೂರನಾಗಿ ಅಮೃತತ್ವವನ್ನು ಹೊಂದುತ್ತಾನೆ. ಇದು ಮಂತ್ರದ ಪೂರ್ವಾರ್ಧದ ತಾತ್ಪರ್ಯವು.

ವಿಷಯವಾಗಿಸಿಕೊಳ್ಳದೆ ಬ್ರಹ್ಮವನ್ನು ಅರಿಯುವದು ಹೇಗೆ ಸಾಧ್ಯ ವಾದೀತು ?– ಎಂಬ ಪ್ರಶ್ನೆಗೆ ಈಗ ಉತ್ತರವು ತಾನೇ ತೋರಿಕೊಳ್ಳುತ್ತದೆ. ಯಾವಯಾವದನ್ನು ಅರಿಯುವೆವೋ ಅದೆಲ್ಲವೂ ವಿಷಯವಾಗಿರಬೇಕು– ಎಂಬ ನಿಯಮವಿರುವದು ನಿಜ. ಆದರೆ ಯಾವ ಅರಿವಿನ ಬೆಳಕಿನಿಂದ ನಾವು ಎಲ್ಲವನ್ನೂ ಅರಿಯುವೆವೋ ಅದು ಯಾವಾಗಲೂ ವಿಷಯಿಯಾಗಿಯೇ ಇರುತ್ತದೆ. ಆ ಅರಿವಿನ ಬೆಳಕನ್ನು ನಾವು ವಿಷಯವಾಗಿ ಅರಿಯುವದಕ್ಕೆ ಆಗುವದಿಲ್ಲವೆಂಬುದು ನಿಜ ; ಆದರೆ ಅದನ್ನು ವಿಷಯವಾಗಿ ಅರಿತು ಹೊಸದಾಗಿ ಬೆಳಗಿಸಿಕೊಳ್ಳ ಬೇಕೆಂಬ ಆವಶ್ಯಕತೆಯೇ ಇರುವದಿಲ್ಲ. ಏಕೆಂದರೆ ವಿಷಯಗಳಿಗೆ ತಮ್ಮ ಬೆಳಕು ಇಲ್ಲವಾದ್ದರಿಂದ ಅವನ್ನು ಅರಿವಿನ ಬೆಳಕಿನಿಂದ ನೋಡಿ ಅರಿತುಕೊಳ್ಳಬೇಕಾಗು ತ್ತದೆ. ಆದರೆ ಈ ಅರಿವು ತಾನೇ ಬೆಳಗುತ್ತಿರುತ್ತದೆ, ಯಾವಾಗಲೂ ಬೆಳಗುತ್ತಿರು ತ್ತದೆ. ಎಲ್ಲವನ್ನೂ ಬೆಳಗುವ, ಯಾವಾಗಲೂ ಬೆಳಕಿನ ಸ್ವಭಾವವೇ ಆಗಿರುವ ಅರಿವನ್ನು ಮತ್ತೊಂದು ಬೆಳಕಿನಿಂದ ಅರಿಯಬೇಕಾದ ಆವಶ್ಯಕತೆ ಏನು ? ಆವಶ್ಯಕತೆಯೂ ಇಲ್ಲ, ಅದನ್ನು ಬೆಳಗಬಲ್ಲ ಬೇರೊಂದು ಬೆಳಕೂ ಇರುವದಿಲ್ಲ. ನಮ್ಮೆಲ್ಲರಲ್ಲಿಯೂ ಪರಮಾತ್ಮನ ಬೆಳಕಿರುತ್ತದೆ ; ಆ ಬೆಳಕಿನಿಂದಲೇ ನಾವೂ ಬೆಳಗುತ್ತಾ ನಮ್ಮ ಮುಂದಿರುವದೆಲ್ಲವನ್ನೂ ಬೆಳಗುತ್ತಿರುತ್ತೇವೆ. ನಮ್ಮ ಮನಸ್ಸುಗಳೆಂಬ ಬತ್ತಿಗಳು ಉರಿಯುತ್ತಿರುವದು ಆತನ ಬೆಳಕಿನಿಂದಲೇ.

ಆ ಬತ್ತಿಗಳು ಎಷ್ಟು ಸಲ ಆರಿಹೋಗಲಿ, ಆತನ ಬೆಳಕೆಂಬ ನಂದಾದೀಪವು ನಮ್ಮೆಲ್ಲರ ಹೃದಯದಲ್ಲಿ ಒಂದೇಸಮನೆ ಝುಗಝುಗಿಸುತ್ತಲೇ ಇರುವದು. ಹೀಗೆಂಬುದನ್ನು ಅರಿತುಕೊಳ್ಳುವದೇ ನಿಜವಾದ ಅರಿವು. ಬ್ರಹ್ಮವನ್ನು ವಿಷಯವಾಗಿ ಅರಿತುಕೊಳ್ಳುವದಕ್ಕಾಗುವದಿಲ್ಲ, ಆದ್ದರಿಂದ ನಾನು ಬ್ರಹ್ಮವನ್ನು ಅರಿಯಲಿಲ್ಲ-ಎಂಬುದನ್ನು ಅರಿತುಕೊಂಡವನಿಗೇ ಬ್ರಹ್ಮದ ನಿಜವಾದ ಅರಿವು ಆಗಿರುತ್ತದೆ. ಮಿಕ್ಕವರಿಗೆ ಯಾರಿಗೂ ಅದರ ಅರಿವಾಗಿರುವದಿಲ್ಲ.

ನಮ್ಮಲ್ಲಿ ಕೆಲವರಿಗೆ ಮಾತ್ರ ಈ ಅರಿವು ಆಗಿರಬಹುದು, ಮಿಕ್ಕವರಿಗೆ ಆಗದೆ ಇರಬಹುದು. ಆದರೇನು? ನಮ್ಮಲ್ಲಿರುವ ಬೆಳಕೆಲ್ಲವೂ ಆ ಪರಮಾತ್ಮನದೇ-ನಮ್ಮ ಶರೀರದಲ್ಲಿರುವ ಒಗರು, ಕಾಂತಿ; ಪ್ರಾಣದಲ್ಲಿರುವ ಶಕ್ತಿ; ಮನದಲ್ಲಿ ಆಗಿಂದಾಗ್ಗೆ ಹೊರಬೀಳುವ ಒಳ್ಳೊಳ್ಳೆಯ ಭಾವನೆಗಳು ; ಬುದ್ಧಿಯಲ್ಲಿ ಆಗಾಗ್ಗೆ ಚಿಗುರುವ ಜಾಣ್ಮೆ ; ಅಹಂತೆಯಲ್ಲಿ ಹೊರಹೊಮ್ಮುವ ಅಭಿಮಾನ-ಇದೆಲ್ಲಕ್ಕೂ ಬುಡದಲ್ಲಿ ಆತನೇ ಇರುತ್ತಾನೆ. ಆತನೇ ನಮ್ಮಗಳೆಲ್ಲರ ತಿರುಳು. ನಮ್ಮಗಳೆಲ್ಲರ ಆತ್ಮನು. ಮಾನವನು ಎಲ್ಲಾ ಬಗೆಯ ವೀರ್ಯವನ್ನೂ ಹೊಂದುವದೂ ಆ ಪರಮಾತ್ಮನಿಂದಲೇ. ಧನದಿಂದಲಾಗಲಿ, ಜನದಿಂದಲಾಗಲಿ, ಮಂತ್ರದಿಂದಲಾಗಲಿ, ಮೂಲಿಕೆಗಳಿಂದಲಾಗಲಿ, ತಪಸ್ಸಿನಿಂದಲಾಗಲಿ, ಯೋಗದಿಂದಲಾಗಲಿ- ನಮಗೆ ವೀರ್ಯವು ಬರುವದೆಂದು ನಂಬುವದು ಅವಿವೇಕವು ; ಅವುಗಳಿಂದ ಬರುವದೆಂದು ನಾವು ಭಾವಿಸುವ ಅಲ್ಪವೀರ್ಯವೂ ನಿಜವಾಗಿ ಆ ಪರಮಾತ್ಮನಿಂದಲೇ ಬರುತ್ತದೆ. ಆದರೆ ಈ ನಿಜವನ್ನರಿಯದ್ದರಿಂದ ಅದು ಮರ್ತ್ಯವಾಗಿರುತ್ತದೆ, ಮೂರುಘಳಿಗೆ ತೋರಿ ಹಾರುವದಾಗಿರುತ್ತದೆ. ಆದರೆ ಯಾವಾಗ ಎಲ್ಲಾ ವೀರ್ಯಕ್ಕೂ ಮೂಲವು ಪರಮಾತ್ಮನೇ, ಆತನಿಂದಲೇ ನಮ್ಮ ಜ್ಞಾನಶಕ್ತಿಬಲವೀರ್ಯತೇಜಗಳೆಲ್ಲವೂ ಹೊರಚಿಮ್ಮುತ್ತಿರುವವು- ಎಂದು ಆತನ ಪರಮಾರ್ಥಸ್ವರೂಪದ ಅರಿವನ್ನು ನಾವು ಅರಿತುಕೊಳ್ಳುವೆವೋ ಆ ಕೂಡಲೆ ನಮಗೆ ಅಪರಿಮಿತವಾದ ಎಂದಿಗೂ ಸಾವಿಲ್ಲದ ವೀರ್ಯವು ದೊರೆಯುವದು. ಆ ಬ್ರಹ್ಮವಿದ್ಯೆಯಿಂದಲೇ ನಾವು ಅಮೃತರಾಗಿ ಆನಂದದಿಂದ ನಲಿದಾಡುವ ಪರಮಸಿದ್ಧಿಯನ್ನು ಪಡೆದುಕೊಳ್ಳುವೆವು.

# ೭. ಬ್ರಹ್ಮಜ್ಞಾನದ ಹೆಚ್ಚುಗಾರಿಕೆ

ಇಹ ಚೇದವೇದೀದಥ ಸತ್ಯಮಸ್ತಿ
ನ ಚೇದಿಹಾವೇದೀನ್ಮಹತೀ ವಿನಷ್ಟಿಃ।
ಭೂತೇಷು ಭೂತೇಷು ವಿಚಿತ್ಯ ಧೀರಾಃ
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ

"ಇಲ್ಲಿಯೇ ಅರಿತುಕೊಂಡರೆ ಸತ್ಯವುಂಟು, ಇಲ್ಲಿ ಅರಿತುಕೊಳ್ಳದಿದ್ದರೆ ದೊಡ್ಡ ನಷ್ಟವು. ಭೂತಭೂತಗಳಲ್ಲಿಯೂ ಅರಿತುಕೊಂಡ ಧೀರರು ಈ ಲೋಕದಿಂದ ಹೊರಟುಹೋಗಿ ಅಮೃತರಾಗುತ್ತಾರೆ."

ಪರಮಾತ್ಮಜ್ಞಾನದ ಮಹಿಮೆಯನ್ನು ಹೊಗಳುವದಕ್ಕಾಗಿ ಈ ಮಂತ್ರವು ಬಂದಿರುತ್ತದೆ. ಹೊಗಳುವದೆಂದರೆ ಜ್ಞಾನದಲ್ಲಿಲ್ಲದ ಗುಣವನ್ನು ಆರೋಪಿಸುವ ಮೃಷಾಸ್ತುತಿಯಲ್ಲ; ಜ್ಞಾನದಲ್ಲಿ ಆದರವುಂಟಾಗುವಂತೆ ಅದರಲ್ಲಿ ಹೆಚ್ಚುಗಾರಿಕೆಯನ್ನು ಎತ್ತಿತೋರಿಸುವ ಸ್ತುತಿಯಿದು.

ಆತ್ಮನನ್ನು ಇಲ್ಲಿಯೇ ತಿಳಿದುಕೊಳ್ಳಬೇಕು, ಆಗಲೇ ನಮಗೆ ನಾಶವಿಲ್ಲದ ಫಲವುಂಟಾಗುತ್ತದೆ, ಆಗಲೇ ನಾವು ಮನುಷ್ಯರಾಗಿ ಹುಟ್ಟಿದ್ದಕ್ಕೆ ಸಾರ್ಥಕ್ಯವುಂಟಾಗುತ್ತದೆ. ಮನುಷ್ಯನು ಮಿಕ್ಕ ಪ್ರಾಣಿಗಳಂತೆಯೇ ವಿಷಯಗಳನ್ನು ಭೋಗಿಸಿ ಕೊನೆಗೆ ಒಂದುದಿನ ಶರೀರವನ್ನು ಒಗೆದುಹೋದರೆ ಮನುಷ್ಯತ್ವದ ಹೆಚ್ಚುಗಾರಿಕೆಯೇನು ? ಆತ್ಮಜ್ಞಾನವನ್ನು ಸಂಪಾದಿಸಿಕೊಂಡರೇ ಮನುಷ್ಯನು ನಿಜವಾಗಿ ಇದ್ದಂತೆ ಆಯಿತು, ಇಲ್ಲದಿದ್ದರೆ ಅವನು ಇದ್ದಂತೆಯೇ ಅಲ್ಲ. ಇರವಿನ ತಿರುಳಾಗಿರುವ ಆತ್ಮನು ತಾನೇ ಎಂದು ತಿಳಿದುಕೊಳ್ಳದವನಿಗೆ ನಿಜವಾದ ಇರವು ಎಲ್ಲಿಯದು ? ನಾವುಗಳೆಲ್ಲರೂ ಈಗಲೇ 'ನಾನು ಇದೇನೆ' ಎಂದುಕೊಳ್ಳುತ್ತಿರುವದು ಇಜ; ಆದರೆ ನಾವು ಬಡಾಯಿಕೊಚ್ಚಿಕೊಳ್ಳುವ ಈ ಇರವು ಪರಮಾರ್ಥವಾದ ಇರವಲ್ಲ, ಅದು ಪರಮಾರ್ಥದಿರವಿನ ನೆರಳು. ಆದ್ದರಿಂದ ಇಲ್ಲಿಯೇ ಈಗಲೇ ನಾವು ಬದುಕಿರುವಾಗಲೇ, ನಿಜವಾದ ಇರವನ್ನು ತಿಳಿದುಕೊಳ್ಳಬೇಕು. ನಾಳೆ, ನಾಡಿದ್ದು, ಮುಂದಿನ ಜನ್ಮದಲ್ಲಿ, ಅಥವಾ ಮತ್ತೊಂದು ಲೋಕದಲ್ಲಿ ಕಾಲಾನುಕಾಲಕ್ಕೆ ನಮಗೆ ಜ್ಞಾನವುಂಟಾದೀತೆಂಬ ಹುಸಿಯಾಸೆಯ ಮನಸ್ಸಿನ ಮಂಡಿಗೆಯ ಜೀವನವನ್ನು ಬಿಟ್ಟುಬಿಡಬೇಕು. ಹಾಗಾದರೆ ನಮಗೆ ಪರಮಾರ್ಥಸತ್ಯವಾದ ಫಲವುಂಟಾಗುತ್ತದೆ.

ಹಾಗಿಲ್ಲದೆ ಬದುಕಿರುವವರೆಗೂ ಅಜ್ಞಾನದ ಕೆಸರಿಗೆ ಮಡುವಿನಲ್ಲಿಯೇ ಬಿದ್ದು ಹೊರಳಾಡುತ್ತಿರುವವನಿಗೆ ದೊಡ್ಡ ನಷ್ಟವುಂಟಾಗುತ್ತದೆ. ಜ್ಞಾನದಿಂದ ಆಗುತ್ತಿದ್ದ ಮಹಾಫಲವನ್ನು ಕಳೆದುಕೊಂಡದ್ದು ಒಂದು ನಷ್ಟ, ಅದನು ಅರಿತುಕೊಳ್ಳದೆ ಆತ್ಮನನ್ನು ತಪ್ಪಾಗಿ ತಿಳಿದುಕೊಂಡು ತೀವ್ರವಾದ ರೋಗ,

ಮುಪ್ಪು, ಮರಣ-ಮುಂತಾದ ಅನರ್ಥಗಳಿಂದೊಡಗೂಡಿದ ಜನ್ಮವನ್ನು ಮತ್ತೆ ಮತ್ತೆ ಪಡೆಯುತ್ತಿರುವದು ಮತ್ತೊಂದು ನಷ್ಟ. ಇದಕ್ಕಿಂತ ದೊಡ್ಡ ನಷ್ಟವು ಮತ್ತೆ ಯಾವದಿರುವದು ? ಮನುಷ್ಯನು ಇಡಿಯ ಜಗತ್ತನ್ನೇ ಸಂಪಾದಿಸಿ ಕೊಂಡರೂ ಆತ್ಮನನ್ನು ಕಳೆದುಕೊಂಡರೆ ಯಾವ ಲಾಭವಾದೀತು ? ಅಜ್ಞಾನ ವಿರುವವನಿಗೆ ಮುಂದೆ ಯಾವ ಜನ್ಮವುಂಟಾಗುವದೋ ಹೇಳುವದಕ್ಕಿಲ್ಲ. ಪುಣ್ಯವನ್ನು ಮಾಡಿದವನಿಗೆ ದೇವತಾಜನ್ಮವು ಬರಬಹುದು, ಪಾಪವನ್ನು ಮಾಡಿ ದವನಿಗೆ ಪಶುಪಕ್ಷಿಮೃಗಾದಿಗಳ ಅಥವಾ ಪ್ರೇತಾದಿಗಳ ಜನ್ಮವು ಬಂದರೂ ಬರಬಹುದು. ಉತ್ಕೃಷ್ಟಜನ್ಮವು ಬಂದರೆ ಭೋಗದಲ್ಲಿ ಆಸಕ್ತಿಯೂ ಹೆಚ್ಚ ಬಹುದು ; ನಿಕೃಷ್ಟಜನ್ಮವು ಬಂದರೆ ಸಂಕಟದಲ್ಲಿ ಎಲ್ಲಾ ವಿಚಾರಶಕ್ತಿಯೂ ಮೊಂಡಾಗಿಹೋಗಿಬಿಡಬಹುದು. ಇದೂ ಅಲ್ಲದೆ ವಿಚಾರಶಕ್ತಿಯಿಂದ ಕೂಡಿದ ಜನ್ಮವು ಬಂದೇತೀರುವದೆಂಬ ಭರವಸೆಯಾದರೂ ಎಲ್ಲಿ ಬಂತು ? ಮುಂದಿನ ಜನ್ಮದಲ್ಲಿ ಜ್ಞಾನಕ್ಕೆ ಬೇಕಾದ ಆಧ್ಯಾತ್ಮಿಕಸಾಮಗ್ರಿಯೆಲ್ಲವೂ ದೊರೆತೇತೀರುವ ದೆಂದಾಗಲಿ, ಅದು ಹುಟ್ಟಿಕೊಂಡು ಬೆಳೆಯುವದಕ್ಕೆ ತಕ್ಕ ಸುತ್ತುವಳಿಯವು ದೊರೆತೇತೀರುವದೆಂದಾಗಲಿ ಯಾವ ನೆಚ್ಚಿಗೆಯಿಂದ ಹೇಳಬಹುದು ? ಇಲ್ಲ. ಆದ್ದರಿಂದ ಅಜ್ಞಾನಕ್ಕಿಂತ ಹೆಚ್ಚಿನ ನಷ್ಟವಿಲ್ಲ.

ಆದ್ದರಿಂದ ಹಿಂದೆ ಹೇಳಿದ ಮಂತ್ರದ ಸರಣಿಯಿಂದ ಸರ್ವಭೂತ ಗಳಲ್ಲಿಯೂ ಇರುವ ಒಬ್ಬ ಆತ್ಮನೇ ನಮ್ಮ ಆತ್ಮನೆಂಬುದನ್ನು ಈಗಲೇ ಅರಿತು ಕೊಳ್ಳಬೇಕು. ನಮ್ಮ ಸಕಲಪ್ರತ್ಯಯಗಳಿಗೂ ಸಾಕ್ಷಿಯಾಗಿರುವ ಚೈತನ್ಯವು ದೇಶಕಾಲವಸ್ತುಗಳ ಸುತ್ತುಗಟ್ಟಿಗೆ ಸಿಕ್ಕಿಬಿದ್ದಿಲ್ಲವೆಂಬುದು ಸ್ಪಷ್ಟವಾಗಿರುತ್ತದೆ. ಈಗ ನಮ್ಮ ದೇಹಕ್ಕೆ ಕಟ್ಟುಬಿದ್ದು ಇದರೊಳಗೆ ಇರುವಂತೆ ತೋರುತ್ತಿರುವ ಆತ್ಮಚೈತನ್ಯವು ನಿಜವಾಗಿ ನಮ್ಮ ಮನಃಪ್ರತ್ಯಯಗಳಿಗೆಲ್ಲ ಸಾಕ್ಷಿಯಾಗಿರುವದ ರಿಂದ, ಆ ಪ್ರತ್ಯಯಗಳಿಗೆ ಗೋಚರವಾಗುವ ಕಾಲಾಕಾಶಗಳಿಗೆ ಕೂಡ ಕಟ್ಟುಬಿದ್ದಿರುವದಿಲ್ಲವೆಂದು ಮನವರಿಕೆಯಾಗುತ್ತದೆ. ಅನಾತ್ಮವಸ್ತುಗಳೆಲ್ಲವೂ ಕಾಲಾಕಾಶದೊಳಗೇ ಇದ್ದುಕೊಂಡು ಕಾರ್ಯಕಾರಣಭಾವವೇ ಮುಂತಾದ ಪರಸ್ಪರಸಂಬಂಧವುಳ್ಳವುಗಳಾಗಿರುವದರಿಂದ ಕಾಲಾಕಾಶಗಳಿಗೂ ಕಟ್ಟುಬೀಳದ ಈ ಆತ್ಮನಿಗೆ ಯಾವದೊಂದು ಅನಾತ್ಮರಾಶಿಯ ಸೋಂಕೂ ಇಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಅದು ಯಾವದೊಂದು ದೇಹಾದಿಗಳ ಗುಂಪಿ ನೊಳಗೂ ಇತತಕ್ಕದ್ದಲ್ಲ; ಅಥವಾ ನಮ್ಮ ದೇಹದೊಳಗೆ ಅದು ಹೇಗೆ ಇರುವದೊ ಹಾಗೆಯೇ ಮಿಕ್ಕ ಎಲ್ಲಾ ಜೀವರ ದೇಹದೊಳಗೂ ಅದೊಂದೇ ಚೈತನ್ಯವು ಇದ್ದು ಕೊಂಡಿರುತ್ತದೆ ಅಥವಾ ಯಾವದೊಂದು ದೇಹಕ್ಕೂ ಕಟ್ಟುಬೀಳದೆ ಸಮಸ್ತ ಪ್ರಾಣಿಗಳ ದೇಹಪ್ರಾಣಾದಿಗಳಿಗೂ ಸಾಕ್ಷಿಯಾಗಿ ಅವುಗಳನ್ನು ವಿಷಯೀಕರಿಸಿ

ಕೊಂಡಿರುವವರಿಂದ; ಅವುಗಳೆಲ್ಲದರ ಇರವಿಗೂ ತೋರುವಿಕೆಗೂ ಮೂಲವಾಗಿರುವ ಈ ಚೈತನ್ಯವು ಸಕಲಜಗಜ್ಜನ್ಮಾದಿಗಳಿಗೂ ಆಧಾರವಾಗಿರುವ ನಿತ್ಯಶುದ್ಧಬುದ್ಧ ಮುಕ್ತಸ್ವಭಾವವೂ ಸರ್ವಜ್ಞನೂ ಸರ್ವಶಕ್ತಿಯುತವೂ ಆಗಿರುವ ಪರಬ್ರಹ್ಮವೇ ಆಗಿರುತ್ತದೆ ಎಂದು ಯಾವಾಗ ಮನಗಾಣುವೆವೋ ಆಗ ಈ ಲೋಕವನ್ನು ದಾಟಿ ಇದರ ಕಟ್ಟನ್ನು ಕಳಚಿಕೊಂಡವರಾಗುವೆವು. ಹೊರಗೆ ಕಾಣುವ ವಿಷಯ ಗಳಲ್ಲಿಯೂ ಒಳಗಿರುವಂತಿರುವ ದೇಹಪ್ರಾಣಾದಿಗಳಲ್ಲಿಯೂ ನಾನು. ನನ್ನದು- ಎಂದು ಮೋಹದಿಂದ ತೊಳಲುತ್ತಿರುವ ಬುದ್ಧಿಯೇ ಅವಿದ್ಯೆಯು. ಈ ಅವಿದ್ಯೆಯ ಲೋಕವು ಗಂಧರ್ವನಗರದಂತೆ ತೋರಿಹಾರುವದೆಂತಲೂ ಇದಕ್ಕೆ ತನ್ನದೇ ಆದ ಇರವು ಇಲ್ಲವೆಂತಲೂ ಆತ್ಮಚೈತನ್ಯದ ಇರವೇ ಇದರ ಇರವೆಂತಲೂ ತಿಳಿದವರೇ ಧೀರರು.

ವಿಷಯಗಳಲ್ಲಿ ಮರ್ತ್ಯತ್ವವಿದೆ, ಅವುಗಳು ಕ್ಷಣಕ್ಕೊಂದು ಬಗೆಯಾಗಿ ಮಾರ್ಪಡುತ್ತಿರುತ್ತವೆ ; ವಿಷಯಗಳನ್ನು ಮುಟ್ಟಿ ಭೋಗವನ್ನು ಕೊಡುವ ವೆಂದು ನಾವು ನೆಚ್ಚಿರುವ ಇಂದ್ರಿಯಗಳಲ್ಲಿಯೂ ಮರ್ತ್ಯತ್ವವಿದೆ, ಅವುಗಳೂ ಕ್ಷಣಕ್ಕೊಂದಿಷ್ಟು ಸೊರಗುತ್ತಲೂ ಸವೆಯುತ್ತಲೂ ತೇಜೋಹೀನವಾಗುತ್ತಲೂ ಇರುತ್ತವೆ. ಹೀಗೆ ಇಂದ್ರಿಯಗಳು, ವಿಷಯಗಳು, ಅವೆರಡರ ಸೇರುವೆಯಿಂದಾ ಗುವ ಭೋಗ- ಇವೆಲ್ಲವೂ ಮರ್ತ್ಯವೆಂತಲೂ ಕೊನೆಗೆ ದುಃಖಕ್ಕೇ ಕಾರಣ ವೆಂತಲೂ ತಿಳಿದು ಅವುಗಳಿಂದ ಯಾವನು ಹಿಮ್ಮೆಟ್ಟುವನೋ ಅವನು ಅಮೃ ತತ್ವದ ಹಾದಿಯನ್ನು ಹಿಡಿಯುವನು. ಇದರಂತೆ ದೇಹೇಂದ್ರಿಯಗಳಲ್ಲಿ ಕೆಲವು ಕಾಲದವರೆಗೆ ತೋರಿಕೊಳ್ಳುವ ಪ್ರಾಣ, ದೇಹೇಂದ್ರಿಯವಿಷಯಗಳಲ್ಲಿ ಅಭಿಮಾನ ವನ್ನುಂಟುಮಾಡುವ ಪ್ರತ್ಯಯಗಳು- ಇವುಗಳನ್ನೂ ಮರ್ತ್ಯತ್ವದೃಷ್ಟಿಯಿಂದ ಅಸಡ್ಡೆಮಾಡಿ ಆಚೆಗೆ ತಳ್ಳುವವನು ಮಹಾಧೀರನು. ಅಂಥವನ ಕಣ್ಣಿಗೆ ದೇಹವೇ ಮುಂತಾದ ಒಳಗಿನ ಲೋಕವೂ ಸೂರ್ಯಚಂದ್ರಾದಿಗಳಿಂದೊಡಗೂಡಿರುವ ಹೊರಗಿನ ವಿಶಾಲವಾದ ಲೋಕವೂ ಕ್ಷುಲ್ಲಕವಾಗಿ ತೋರುವದು. ಸಾಮಾನ್ಯರ ಕಣ್ಣಿನಲ್ಲಿ ಅತ್ಯಲ್ಪವಾಗಿ ಕಾಣುವ ಆತ್ಮನು ತನ್ನೊಳಗೂ ಮಿಕ್ಕ ಬ್ರಹ್ಮಾದಿಸ್ತಂಬ ಪರ್ಯಂತವಾದ ಸಕಲಭೂತಗಳೊಳಗೂ ಅಂತರ್ಯಾಮಿಯಾಗಿರುವ ಪರಮಾತ್ಮ ನೆಂದೂ ಅವನೇ ದೇಶಕಾಲನಿಮಿತ್ತಗಳ ಕಟ್ಟಿಲ್ಲದ ಪರಬ್ರಹ್ಮವೆಂದೂ ನಿಶ್ಚಯಿಸಿ ಆತನು ಅದರಲ್ಲಿಯೇ ನಿಲುಗಡೆಯನ್ನು ಹೊಂದಿ ಆನಂದಿಸುತ್ತಿರುವನು. ಹೀಗೆ ಯಾವ ಮಹಾತ್ಮನು ಅವಿದ್ಯೆಯಿಂದಾಗಿರುವ ದೇಹೇಂದ್ರಿಯಮನೋಬುದ್ಧ್ಯ ಹಂಕಾರಗಳ ಪಂಜರಕ್ಕೆ ಸಿಲುಕದೆ ಆಚೆಗೆ ಜ್ಞಾನಮಾರ್ಗದಿಂದ ಹೋಗಿ ಪರ ಬ್ರಹ್ಮದಲ್ಲಿಯೇ ನಿಷ್ಠೆಯನ್ನು ಪಡೆದುಕೊಳ್ಳುವನೋ ಅವನೇ ಅಮೃತನಾಗು ವನು, ಅವನೇ ಜೀವನ್ಮುಕ್ತನು.

# ೮. ಬ್ರಹ್ಮವನ್ನರಿಯದ್ದರಿಂದ ಆಗುವ ಕೇಡು

ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ತಸ್ಯ ಹ ಬ್ರಹ್ಮಣೋ
ವಿಜಯೇ ದೇವಾ ಽಮಹೀಯನ್ತ । ತ ಐಕ್ಷನ್ತಾಸ್ಮಾಕಮೇವಾಯಂ
ವಿಜಯೋಽಸ್ಮಾಕಮೇವಾಯಂ ಮಹಿಮೇತಿ ॥ ೧ ॥

ತದ್ಧೈಷಾಂ ವಿಜಜ್ಞೌ ತೇಭ್ಯೋ ಹ ಪ್ರಾದುರ್ಬಭೂವ
ತನ್ನ ವ್ಯಜಾನತ ಕಿಮಿದಂ ಯಕ್ಷಮಿತಿ ॥ ೨ ॥

“ಹಿಂದಕ್ಕೆ ಬ್ರಹ್ಮವು ದೇವತೆಗಳಿಗಾಗಿ ಜಯಿಸಿತು. ಆ ಬ್ರಹ್ಮದ ವಿಷಯದಲ್ಲಿ ದೇವತೆಗಳು ಮಹಿಮೆಯನ್ನು ಪಡೆದುಕೊಂಡರು. ಅವರು ಇದು ನಮ್ಮದೇ ವಿಜಯವು, ‘ಇದು ನಮ್ಮದೇ ಮಹಿಮೆಯು’, ಎಂದು, ಯೋಚಿಸಿಕೊಂಡರು. ಅವರ ಇದನ್ನು ಬ್ರಹ್ಮವು ಅರಿತುಕೊಂಡಿತು. ಅವರ ಮುಂಗಡೆ ತೋರಿಕೊಂಡಿತು ; ಇದು ಯಾವ ಯಕ್ಷರೂಪವೆಂಬುದನ್ನು ಅವರು ಅರಿಯದಾದರು.”

ಈವರೆಗೆ ಕೇನೋಪನಿಷತ್ತಿನಲ್ಲಿ ಹೇಳಿದ ಬ್ರಹ್ಮವಿದ್ಯೆಯ ಸ್ವರೂಪವೇನು ? ಅದರಿಂದ ನಮಗಾಗುವ ಪ್ರಯೋಜನವೇನು ?– ಎಂಬ ವಿಚಾರದಲ್ಲಿ ಸ್ವಲ್ಪ ಮಟ್ಟಿಗೆ ನಮಗೆ ಕಲ್ಪನೆಯಾಗಿರುತ್ತದೆ. ಬ್ರಹ್ಮವೆಂಬುದು ನಮ್ಮೆಲ್ಲರ ಆತ್ಮನು, ಅದೇ ಸರ್ವಜ್ಞನಾದ ಸರ್ವಶಕ್ತನಾದ ಪರಮಾತ್ಮನು. ನಮ್ಮೆಲ್ಲರ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಅರಿಯುತ್ತಿರುವದು ಅದರ ಮಹಿಮೆಯಿಂದ, ಅವು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರುವದು ಅದರ ಶಕ್ತಿಯಿಂದ ; ಅದನ್ನು ಯಾವದೊಂದು ಇಂದ್ರಿಯವೂ ಗೋಚರಿಸಿಕೊಂಡು ಅರಿಯಲಾರದು, ಮನಸ್ಸು ಅದರ ಪ್ರತ್ಯಯವನ್ನು ಮಾಡಿಕೊಂಡು ಗ್ರಹಿಸಲಾರದು, ವಾಕ್ಕು ಅದನ್ನು ಬಣ್ಣನೆಮಾಡಿ ಹೇಳಲಾರದು, ಏಕೆಂದರೆ ಅದೇ ಅವೆಲ್ಲಕ್ಕೂ ತಿರುಳಾಗಿರುವ ಆತ್ಮನಾಗಿರುತ್ತದೆ. ಅದನ್ನು ಚೆನ್ನಾಗಿ ಅರಿತೆವೆನ್ನುವದಕ್ಕೆ ಬರುವಂತಿಲ್ಲ. ಅರಿಯಲಿಲ್ಲವೆಂದು ಅದನ್ನು ಸೊನ್ನೆಯಾಗಿಸುವದಕ್ಕೂ ಆಗುವದಿಲ್ಲ; ಅರಿತದ್ದು ಅರಿಯದ್ದು– ಎರಡಕ್ಕೂ ಸಾಕ್ಷಿಯಾಗಿರುವ ಚೈತನ್ಯವೇ ಆ ಬ್ರಹ್ಮವು. ನಾವು ಏನನ್ನು ಅರಿತರೂ ಅದರ ಬೆಳಕಿನಿಂದಲೇ ಅರಿಯುತ್ತಿರುವೆವೆಂಬುದನ್ನು ಅರಿತು ಅದರಲ್ಲಿ ನಿಲುಗಡೆಯನ್ನು ಹೊಂದಿದರೆ ನಮಗೆ ಎಲ್ಲಾ ಬಲವೂ ಬರುತ್ತದೆ, ಆ ಅರಿವಿನಿಂದಲೇ ನಾವು ಅಮೃತರಾಗುತ್ತೇವೆ. ಇದೀಗ ಬ್ರಹ್ಮವಿದ್ಯೆಯ ಪ್ರಯೋಜನವು.

ಈ ಬ್ರಹ್ಮವಿದ್ಯೆಯನ್ನು ಪಡೆಯಕೊಳ್ಳದೆ ಇದ್ದರೆ ದೊಡ್ಡ ನಷ್ಟವುಂಟು. ಏಕೆಂದರೆ ನಾವು ಮತ್ತೆ ಮತ್ತೆ ಹುಟ್ಟಿಸಾಯುತ್ತಿರುವದು ಬ್ರಹ್ಮಸ್ವರೂಪದ ಅಜ್ಞಾನದಿಂದಲೇ; ಒಂದೊಂದು ಜನ್ಮದಲ್ಲಿಯೂ ಬಗೆಬಗೆಯಾಗಿ ಕಷ್ಟಪರಂಪರೆ ಯನ್ನನುಭವಿಸುವದೂ ಅದನ್ನು ತಿಳಿಯದ್ದರಿಂದಲೇ.

ಸಾಮಾನ್ಯವಾದ ಮನುಷ್ಯರಿಗೆ ಮಾತ್ರವೇ ಅಲ್ಲ, ಅತ್ಯಂತ ಉತ್ಕೃಷ್ಟ ಜನ್ಮವನ್ನು ಪಡೆದಿರುವ ದೇವತೆಗಳಿಗೆ ಕೂಡ ಹೀಗೆಯೇ. ದೇವತೆಗಳಿಗೆ ನಮಗಿಂತ ಹೆಚ್ಚಿನ ಜ್ಞಾನಸಾಮಗ್ರಿಯಿದೆ, ನಮಗಿಂತ ಹೆಚ್ಚಿನ ಭೋಗ ಸಾಮಗ್ರಿಯಿದೆ. ಆದರೆ ಅವರ ನರಗಳು ನಮಗಿಂತ ಹೆಚ್ಚು ಸೂಕ್ಷ್ಮವಾಗಿಯೂ ಇರುತ್ತವೆ: ಆದ್ದರಿಂದ ಅವರಿಗೆ ಆಗುವ ಮನಸ್ಸಿನ ಹಿಗ್ಗುತಗ್ಗುಗಳು ನಮಗಿಂತ ಹೆಚ್ಚಿನ ವೇಗದಲ್ಲಿ ಆಗುತ್ತವೆ, ಸುಖದುಃಖಗಳು ಅವರಿಗೆ ಇನ್ನೂ ಬಲವಾಗಿಯೇ ಆಗುತ್ತವೆ. ಆದ್ದರಿಂದ ಈ ಬ್ರಹ್ಮವಿದ್ಯೆಯ ಅವಶ್ಯಕತೆಯು ಅವರಿಗೆ ನಮ ಗಿಂತಲೂ ಹೆಚ್ಚು, ಅದು ಇಲ್ಲದಿದ್ದರೆ ಆಗುವ ನಷ್ಟವು ಇನ್ನೂ ಹೆಚ್ಚು, ಆದ್ದರಿಂದ ನಾವು ಈಗಿರುವದಕ್ಕಿಂತ ಯಾವದಾದರೊಂದು ಉತ್ತಮಸ್ಥಿತಿಯನ್ನು ಪಡೆದು ಕೊಂಡರೆ ನಮಗೆ ಜ್ಞಾನಸಾಮಗ್ರಿಯೂ ಭೋಗಸಾಮಗ್ರಿಗಳೂ ಉತ್ತಮವಾಗಿ ಈಗಿರುವದಕ್ಕಿಂತ ಹೆಚ್ಚಿನ ಸುಖವು ದೊರಕುವದೆಂದು ನೆನಸುವದು ತಪ್ಪು. ಆಗ ಹೆಚ್ಚು ಸುಖವಾದರೆ ಹೆಚ್ಚು ದುಃಖಕ್ಕೂ ಅವಕಾಶವಾಗುತ್ತದೆಯಾದ್ದರಿಂದ ಅಂಥ ಸ್ಥಿತಿಯನ್ನು ಬಯಸುವದಕ್ಕಿಂತ ಈಗಲೇ ಇಲ್ಲಿಯೇ ಬ್ರಹ್ಮವಿದ್ಯೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಇದನ್ನು ತಿಳಿಸುವದಕ್ಕೆ ಈ ಉಪನಿಷತ್ತಿನಲ್ಲಿ ಒಂದು ಕಥೆಯನ್ನು ಉದಾಹರಿಸಿರುತ್ತದೆ.

ಒಂದಾನೊಂದು ಕಾಲದಲ್ಲಿ ದೇವತೆಗಳಿಗೂ ಅಸುರರಿಗೂ ಸಂಗ್ರಾಮ ವಾಯಿತು. ಅದರಲ್ಲಿ ದೇವತೆಗಳಿಗೇ ಗೆಲವಾಯಿತು. ಹಿಂದೆ ತಿಳಿಸಿರುವಂತೆ ನಮಗೆ ಉಂಟಾಗುವ ಬಲವೆಲ್ಲ ಪರಮಾತ್ಮನ ಬಲವೇ, ಆಗುವ ಗೆಲವೆಲ್ಲ ಪರಮಾತ್ಮನದೇ. ನಮ್ಮ ಲಾಭವೂ ಜಯವೂ ಆ ಪರಮಾತ್ಮನ ಅನುಗ್ರಹ ದಿಂದಲೇ ಆಗುತ್ತದೆ. ಯಾರು ಯಾರು ದೈವಸಂಪತ್ತಿನಿಂದ ಕೂಡಿರುವರೋ ಅವರಿಗೆಲ್ಲ ಆ ಪರಮಾತ್ಮನು ಸುಖಶಾಂತಿಗಳಿಗೆ ಬೇಕಾಗುವ ಆನುಕೂಲ್ಯವನು ಒದಗಿಸಿಕೊಡುತ್ತಾನೆ. ಆದರೆ ಯಾರು ಈ ಆನುಕೂಲ್ಯವು ತಮ್ಮ ಪ್ರಯತ್ನ ದಿಂದಲೇ ಒದಗಿತೆಂದೂ ಅದರಿಂದಾದ ಹೆಚ್ಚಳವು ತಮ್ಮದೇ ಎಂದೂ ಹೆಮ್ಮೆ ಪಡುವರೋ ಅವರು ಮೊದಲು ದೇವತೆಗಳಾಗಿದ್ದರೂ ಅಷ್ಟರಮಟ್ಟಿಗೆ ಅಸುರ ರಾದಂತೆಯೇ ಸರಿ; ಮೇಲೆ ಹೇಳಿದ ಸಂದರ್ಭದಲ್ಲಿ ತಮಗೆ ದೊರೆತ ವಿಜಯವು ಪರಮಾತ್ಮನ ಮಹಿಮೆಯೆಂದರಿಯದೆ ದೇವತೆಗಳು ಆ ವಿಜಯಕ್ಕಾಗಿ ಆತನಿಗೆ ಕೃತಜ್ಞರಾಗಿರುವದನ್ನು ಬಿಟ್ಟು ಅಜ್ಞಾನದಿಂದ 'ನಾವೇ ಈ ವಿಜಯವನ್ನು

ಸಂಪಾದಿಸಿದೆವು, ನಾವೇ ಈ ಕೀರ್ತಿಗೆ ಭಾಜನರು' ಎಂದುಕೊಂಡು ಹಿರಿಹಿರಿ ಹಿಗ್ಗಿದರು. ಅವರ ಹೃದಯದಲ್ಲಿ ಆಸುರಸಂಪತ್ತಿನ ಝುಳುಕು ಅಡ್ಡಾಡಿ ದಂತಾಯಿತು.

ಪರಮಾತ್ಮನು ಸರ್ವಜ್ಞನಷ್ಟೆ. ಕೂಡಲೆ ದೇವತೆಗಳ ಈ ದುರಭಿ ಮಾನವು ಆವನಿಗೆ ಗೊತ್ತಾಯಿತು. ನಮ್ಮ ಮನಸ್ಸಿನಲ್ಲಿ ಹೊಳೆಯುವ ಯಾವ ಯೋಚನೆಯು ತಾನೇ ಆ ಸರ್ವಸಾಕ್ಷಿಗೆ ಗೋಚರವಾಗದೆ ಇದ್ದೀತು ? ಪರ ಮಾತ್ಮನು ದಯಾಘನನು. ಆತನಿಗೆ ನಾವುಗಳು ಯಾರೂ ದುರಭಿಮಾನದಿಂದ ಕೆಟ್ಟುಹೋಗುವದು ಸಹಿಸುವ ನಮ್ಮನ್ನು ಮತ್ತೆ ತನ್ನ ಕಡೆಗೆ ಎಳೆಯು ವದಕ್ಕೆಂದು ನಮ್ಮ ಅಭಿಮಾನವನ್ನು ತಗ್ಗಿಸುವದಕ್ಕೆ ತಕ್ಕ ಏರ್ಪಾಡನ್ನು ಕೂಡಲೆ ಮಾಡಿಬಿಡುತ್ತಾನೆ. ಪ್ರಪಂಚದಲ್ಲಿ ದುಃಖವೇಕಿದೆ ?– ಎಂದು ಕೇಳುವ ವರಿಗೆ ಪರಮಾತ್ಮನ ಈ ಕರುಣೆಯ ಬಗ್ಗೆಯು ಗೋಚರಿಸುವದಿಲ್ಲ. ಯಾವಾ ಗಲೂ ತನ್ನ ಸ್ವರೂಪದಿಂದ ಕೃತಕೃತ್ಯರಾಗಿ ತನ್ನ ನಿಷ್ಠೆಯಿಂದಲೇ ಜೀವರು ಗಳೆಲ್ಲರೂ ಆನಂದಿಸಲಿ ! – ಎಂಬುದು ಆತನ ಸತ್ಯಸಂಕಲ್ಪವು. ನಾವು ಆ ಸಂಕಲ್ಪಕ್ಕೆ ವಿರುದ್ಧವಾಗಿ ನಡೆಯುತ್ತಿರುವಾಗಲೂ ಆತನು ಕೊಟ್ಟ ಶಕ್ತಿಯನ್ನೆ ವಿನಿಯೋಗಿಸುತ್ತೇವಾದರೂ ಅದನ್ನು ತಪ್ಪಾಗಿ ಉಪಯೋಗಿಸುತ್ತಿರುತ್ತೇವೆ. ಇದ್ದು ಆಗಬಾರದೆಂದು ಆತನು ಕೂಡಲೆ ನಮಗೆ ಎಚ್ಚರಿಕೆಕೊಡುವಂತೆ ಏರ್ಪಾಡು ಮಾಡಿಟ್ಟಿರುತ್ತಾನೆ. ಇದೇ ದುಃಖಕ್ಕೆ ಕಾರಣವು. ಪ್ರಕೃತಸಂದರ್ಭದಲ್ಲಿ ದೇವತೆಗಳ ದುರಭಿಮಾನವು ತಗ್ಗಲಿ– ಎಂಬ ಉದ್ದೇಶದಿಂದ ಆ ಮಹಾಮಹಿಮನು ಒಂದಾನೊಂದು ಲೀಲೆಯನ್ನು ನಡೆಯಿಸಿದನು. ಅವರಿಗೆಲ್ಲರಿಗೂ ವಿಸ್ಮಯ ವನ್ನುಂಟುಮಾಡುವಂಥ ಒಂದು ಅದ್ಭುತರೂಪವನ್ನು ಧರಿಸಿದನು.

ದೂರದಲ್ಲಿ ಕಾಣಿಸಿಕೊಂಡ ಈ ಅದ್ಭುತರೂಪವು ಏನೆಂಬುದು ದೇವತೆ ಗಳಲ್ಲಿ ಯಾರಿಗೂ ಹೊಳೆಯಲಿಲ್ಲ. ಕೆಲವರು ಮನುಷ್ಯರು ಗುಂಪುಸೇರಿ ನಾನು ಇಂಥವನು ! ಅಂಥವನು– ಎಂದು ಜಂಭಕೊಚ್ಚಿಕೊಳ್ಳುತ್ತಿರುವ ಸಮಯಕ್ಕೆ ಛಿಟಛಿಟಛಿಟೀಲ್, ಎಂದು ಸಿಡಿಲು ಬಡಿದರೆ ಅವರ ಮನಃಸ್ಥಿತಿ ಹೇಗಾಗುತ್ತದೆ ? ಅವರು ತಮ್ಮ ಹೆಚ್ಚಳವನ್ನು ಕೊಚ್ಚಿಕೊಳ್ಳುವದು ನಿಂತುಹೋಗುವದೆಂಬುದು ಹಾಗಿರಲಿ, ಅವರಿಗೆ ತಾವು, ಮತ್ತೊಬ್ಬರು ಎಂಬ ಅರಿವೇ ಇಲ್ಲವಾಗಿಬಿಡುತ್ತದೆ. ಹಾಗಾಯಿತು, ದೇವತೆಗಳ ಮನಃಸ್ಥಿತಿ. ತಾವು ಹಿಂದೆ ಎಂದೂ ಕಾಣದೆ ಇದ್ದ ಈ ಅದ್ಭುತರೂಪವನ್ನು ಕಂಡು ಇದೇನು ಆಸುರರ ಮಾಯೆಯೊ, ಅಥವಾ ಮತ್ತೆ ಯಾವದಾದರೊಬ್ಬ ಯಕ್ಷನು ಸಂಕಲ್ಪಮಾತ್ರದಿಂದ ಧರಿಸಿಕೊಂಡಿರುವ ಭೀಕರ ರೂಪವೋ– ಎಂಬುದು ತಿಳಿಯದೆಹೋಯಿತು. ಅವರೆಲ್ಲರೂ ಬೆಪ್ಪಾಗಿಬಿಟ್ಟರು !

ಪರಮಾತ್ಮನು ನಮ್ಮೆಲ್ಲರ ಆತ್ಮನಾಗಿರುತ್ತಾನೆ, ಸಚ್ಚಿದ್ರೂಪನಾಗಿರುತ್ತಾನೆ, ಎಲ್ಲವನ್ನೂ ಅರಿತುಕೊಳ್ಳುವ ಶಕ್ತಿಯುಳ್ಳವನಾಗಿರುತ್ತಾನೆ– ಎಂದರೆ ಸಾಧಾರಣ

ವಾಗಿ ನಮಗೆ ಆ ವಿಷಯಕ್ಕೆ ಅಷ್ಟೇನೂ ಆದರವುಂಟಾಗುವದಿಲ್ಲ; ಆದರೆ ಅದೇ ಪರಮಾತ್ಮನು ಯಾವದಾದರೊಂದು ಅದ್ಭುತವಾದ ಆಕಾರವನ್ನು ತಳೆದು ಕಾಣಿಸಿಕೊಂಡರೆ, ಅಥವಾ ಯಾವದಾದರೊಂದು ಭಯಂಕರವಾದ ಕೃತಿಯಿಂದ ತನ್ನ ಶಕ್ತಿಯನ್ನು ತೋರ್ಪಡಿಸಿಕೊಂಡರೆ ಕೂಡಲೆ ನಮಗೆ ಆತನ ಮಹಿಮೆಯ ಅರಿವು ಒಂದಿಷ್ಟು ಮನಸ್ಸಿಗೆ ತಟ್ಟುತ್ತದೆ. ವಾಯುವು ಬಿರುಗಾಳಿಯಾದಂತೆಯೂ ಬೆಂಕಿಯು ಕಾಡುಗಿಚ್ಚಾದಂತೆಯೂ ನೀರು ಪ್ರಲಯದ ಕಡಲಾದಂತೆಯೂ ಆತನು ಅದ್ಭುತಾಕಾರವನ್ನು ಧರಿಸಿದಾಗ ಮಾತ್ರ ನಾವು ಬೆರಗಾಗುವೆವು. ಆದರೂ ನಿಜವಾಗಿ ಈ ಆಕಾರದ ಪರಮಾರ್ಥವೇನು? ನಿರಾಕಾರನಾದ ಆತನ ಸಚ್ಚಿದ್ರೂಪವಲ್ಲವೆ? ಇದನ್ನು ಅಜ್ಞರು ಅರಿಯರು. ದೇವತೆಗಳಿಗೂ ಹೀಗೆಯೇ ಆಯಿತು. ಅಸುರರನ್ನು ಕಾಳಗದಲ್ಲಿ ಗೆದ್ದಾಗ ತಮ್ಮಲ್ಲಿ ತೋರಿಕೊಂಡ ಶಸ್ತ್ರಾಸ್ತ್ರಗಳ ಬಲಕ್ಕೆಲ್ಲ ಮೂಲವು ಆ ಪರಮಾತ್ಮನೇ ಆಗಿದ್ದರೂ ಅವರಿಗೆ ಪರಮಾತ್ಮನ ಆ ಪರಮಾರ್ಥರೂಪವು ತಿಳಿಯದಿದ್ದದ್ದರಿಂದ ಜಯವು ತಮ್ಮ ತೋಳುಬಲದಿಂದಲೇ ಸಿಕ್ಕಿತೆಂದು ತೋಚಿತು. ಇಂದ್ರನು, ವಾಯುವು, ಅಗ್ನಿಯು– ಎಂದು ತಮ್ಮ ತಮ್ಮ ವ್ಯಕ್ತಿರೂಪದ ಬಲವನ್ನು ಅವರು ನೆನಪಿನಲ್ಲಿಟ್ಟುಕೊಂಡು ಈ ಬಲದಿಂದಲೇ ತಾವು ಗೆದ್ದೆವೆಂದು ಭಾವಿಸುತ್ತಿದ್ದರು. ಆದರೆ ಅವರ ಈ ದರ್ಪವೆಲ್ಲ ಪರಮಾತ್ಮನ ಒಂದು ಆಕಾರವಿಶೇಷವು ಮುಂದೆ ಕಾಣಿಸಿಕೊಂಡಮಾತ್ರದಿಂದ ಮಾಯವಾಯಿತು. ಅವರಿಗೆ ಈ ರೂಪವು ಯಾವದೆಂದು ಗೊತ್ತಾಗದೆ ಮನಸ್ಸಿನಲ್ಲಿ ಅಂಜಿಕೆಯು ಆವರಿಸಿಕೊಂಡಿತು. ಆತ್ಮಸ್ವರೂಪವನ್ನು ಅರಿತುಕೊಳ್ಳದೆ ಇದ್ದಾಗ ಎಂಥ ದೇವತೆಗಳ ಸ್ಥಾನವು ದೊರೆತರೂ ಅಲ್ಲಿಯೂ ಜೀವನವು ನಿರಾತಂಕವಾಗಿ ಸಾಗಲಾರದೆಂಬುದಕ್ಕೆ, ಇದೊಂದು ಉತ್ತಮವಾದ ನಿದರ್ಶನವಲ್ಲವೆ?

ಲೋಕದಲ್ಲಿ ಅಂಜಿಕೆಯೆಂಬುದು ಸುಖಶಾಂತಿಗಳಿಗೆ ಒಂದು ದೊಡ್ಡ ಅಡಚಣೆಯಾಗಿರುತ್ತದೆ. ನಮಗೆ ಎಂಥ ದೊಡ್ಡ ಪದವಿಯು ಸಿಕ್ಕಿರಲಿ, ಎಂಥ ಧನಜನಬಾಹುಬಲಗಳ ಸಂಪತ್ತಿಯಿರಲಿ, ಎಂಥೆಂಥ ತಪಸ್ಸಿದ್ಧಿಗಳು ಕೈವಶವಾಗಿರಲಿ, ನಮಗಿಂತ ಬಲವಾದ ಒಂದು ಸತ್ತ್ವವು ಇದೆಯೆಂಬ ತಿಳಿವಳಿಕೆಯು ಮನಸ್ಸಿನಲ್ಲಿ ಸುಳಿದರೆಸಾಕು, ಕೂಡಲೆ ಸುಖಶಾಂತಿಗಳ ಸುದ್ದಿಯೇ ಇಲ್ಲದಂತೆ ಆಗುತ್ತದೆ. ಇಂದ್ರ, ಅಗ್ನಿ, ವಾಯು– ಇಂಥ ದೇವತೆಗಳಿಗೂ ಅಂಜಿಕೆಯು ತಪ್ಪಲಿಲ್ಲವೆಂದಮೇಲೆ ನಮ್ಮಂಥವರ ಪಾಡೇನು? ಸುಖಭೋಗಕ್ಕೆ ಗಂಟಲಗಾಳದಂತೆ ಇರುವ ಈ ಅಂಜಿಕೆಗೆ ಅಜ್ಞಾನವೇ ಮೂಲವು. ಎಲ್ಲಾ ಬಗೆಯ ಅಂಜಿಕೆಯೂ ತೊಲಗುವದಕ್ಕೆ ಪರಮಾತ್ಮಸ್ವರೂಪದ ಜ್ಞಾನವೇ ಕಾರಣವು.

## ೯. ಪರಮಾತ್ಮನ ಅನುಗ್ರಹವಿಲ್ಲದೆ ಯಾರೊಬ್ಬರಿಗೂ ಜ್ಞಾನಶಕ್ತಿಗಳು ಒದಗವು

ತೇಽಗ್ನಿಮಬ್ರುವನ್ ಜಾತವೇದ ಏತದ್ವಿಜಾನೀಹಿ
ಕಿಮೇತದ್ ಯಕ್ಷಮಿತಿ ತಥೇತಿ || ೩ ||
ತದಭ್ಯದ್ರವತ್ ತಮಭ್ಯವದತ್ ಕೋಽಸೀತ್ಯಗ್ನಿರ್ವಾ
ಅಹಮಸ್ಮೀತ್ಯಬ್ರವೀಜ್ಜಾತವೇದಾ ವಾ ಅಹಮಸ್ಮೀತಿ || ೪ ||
ತಸ್ಮಿಂಗ್‌ಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ
ಸರ್ವಂ ದಹೇಯಂ ಯದಿದಂ ಪೃಥಿವ್ಯಾಮಿತಿ || ೫ ||
ತಸ್ಮೈ ತೃಣಂ ನಿದಧಾವೇತದ್ದಹೇತಿ
ತದುಪಪ್ರೇಯಾಯ ಸರ್ವಜವೇನ
ತನ್ನ ಶಶಾಕ ದಗ್ಧುಂ ಸ ತತ ಏವ ನಿವವೃತೇ
ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ || ೬ ||
ಅಥ ವಾಯುಮಬ್ರುವನ್ ವಾಯವೇತ-
ದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ ||೭||
ತದಭ್ಯದ್ರವತ್ ತಮಭ್ಯವದತ್ ಕೋಽಸೀತಿ ವಾಯುರ್ವಾ
ಅಹಮಸ್ಮೀತ್ಯಬ್ರವೀನ್ಮಾತರಿಶ್ವಾ ವಾ ಅಹಮಸ್ಮೀತಿ ||೮||
ತಸ್ಮಿಗ್‌ಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ
ಸರ್ವಮಾದದೀಯ ಯದಿದಂ ಪೃಥಿವ್ಯಾಮಿತಿ ||೯||
ತಸ್ಮೈ ತೃಣಂ ನಿದಧಾವೇತದಾದತ್ಸ್ವೇತಿ ತದುಪಪ್ರೇಯಾಯ
ಸರ್ವಜವೇನ ತನ್ನ ಶಶಾಕಾದಾತುಂ ಸ ತತ ಏವ
ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ ಯಕ್ಷಮಿತಿ ||೧೦||

“ಅವರು ಅಗ್ನಿಯನ್ನು ಕುರಿತು ‘ಜಾತವೇದನೆ, ಇದು ಯಾವ ಯಕ್ಷರೂಪವೋ ತಿಳಿದುಕೊಂಡು ಬಾ’ ಎಂದರು; ಹಾಗೇ ಆಗಲೆಂದು ಅದರ ಬಳಿಗೆ ಹೋಗಲು ಅವನನ್ನು ‘ನೀನು ಯಾರು ?’ ಎಂದು ಬ್ರಹ್ಮವು ಕೇಳಿತು. ‘ಅಗ್ನಿಯೇ ನಾನು, ಜಾತವೇದನೇ ನಾನು’ ಎಂದನು. ‘ಹಾಗಾದರೆ ಆ ನಿನ್ನಲ್ಲಿರುವ ವೀರ್ಯವೇ: ’ ಎನ್ನಲು ‘ಈ ಪೃಥ್ವಿಯಲ್ಲಿರುವದನ್ನೆಲ್ಲ ಸುಡಬಲ್ಲೆನು’ ಎಂದನು. ಈ ಹುಲ್ಲು ಕಡಿಯನ್ನು ಸುಡು’ ಎಂದು ಅವನ ಮುಂದೆ ಇಟ್ಟಿತು; ಆದರ ಬಳಿಗೆ ತನ್ನ ಸರ್ವವೇಗದಿಂದ ಹೋದರೂ ಅದನ್ನು ಸುಡಲಾಗಲಿಲ್ಲ. ಅವನು ಕೂಡಲೇ ‘ಈ ಯಕ್ಷರೂಪವನ್ನರಿಯುವದು ನನ್ನಿಂದಾಗಲಿಲ್ಲ’ವೆಂದು

ಹಿಂತಿರುಗಿದನು. ಆಮೇಲೆ ವಾಯುವನ್ನು ಕುರಿತು 'ವಾಯುವೆ, ಇದು ಯಾವ ಯಕ್ಷರೂಪವೋ ತಿಳಿದುಕೊಂಡು ಬಾ' ಎಂದರು ; ಹಾಗೇ ಆಗಲೆಂದು ಅದರ ಬಳಿಗೆ ಹೋಗಲು ಅವನನ್ನು 'ನೀನು ಯಾರು ?' ಎಂದು ಬ್ರಹ್ಮವು ಕೇಳಿತು. 'ವಾಯುವೇ ನಾನು ಮಾತರಿಶ್ವನೇ ನಾನು' ಎಂದನು. 'ಆ ನಿನ್ನಲ್ಲಿರುವ ವೀರ್ಯವೇನು ?' ಎನ್ನಲು 'ಈ ಪೃಥ್ವಿಯಲ್ಲಿರುವವನ್ನೆಲ್ಲ ಎತ್ತಿಕೊಳ್ಳಬಲ್ಲೆನು' ಎಂದನು. 'ಹಾಗಾದರೆ ಈ ಹುಲ್ಲುಕಡ್ಡಿಯನ್ನು ತೆಗೆದುಕೊ' ಎಂದು ಅವನ ಮುಂದೆ ಇಟ್ಟಿತು ; ಅದರ ಬಳಿಗೆ ತನ್ನ ಸರ್ವವೇಗದಿಂದ ಹೋದರೂ ಅದನ್ನು ಎತ್ತಿ ತೆಗೆದುಕೊಳ್ಳಲಾಗಲಿಲ್ಲ. ಅವನು ಕೂಡಲೆ 'ಈ ಯಕ್ಷ ರೂಪವನ್ನರಿಯುವದು ನನ್ನಿಂದಾಗಲಿಲ್ಲ' ಎಂದು ಹಿಂತಿರುಗಿದನು.

ಮೇಲಿನ ವಾಕ್ಯಗಳ ಅರ್ಥವು ಸ್ಪಷ್ಟವಾಗಿಯೇ ಇರುತ್ತದೆ. ಪರಮಾತ್ಮನ ಅದ್ಭುತರೂಪವನ್ನು ಕಂಡು ಮನಸ್ಸಿನಲ್ಲಿ ಅಳುಕಿನಿಂದ ಏನೂ ತೋಚದೆ ಇದ್ದ ದೇವತೆಗಳು ತಮ್ಮಲ್ಲೆಲ್ಲ ಸರ್ವಜ್ಞತ್ವದಿಂದಲೂ ಸರ್ವಶಕ್ತಿತ್ವದಿಂದಲೂ ಪ್ರಸಿದ್ಧರಾಗಿದ್ದ ಅಗ್ನಿವಾಯುಗಳನ್ನು ಕರೆದು ಈ ಯಕ್ಷರೂಪದ ನಿಜವನ್ನರಿತುಕೊಂಡು ಬರಬೇಕೆಂದು ಕಳುಹಿಸಿದರು. ಮೊದಲು ಅಗ್ನಿಯು ಹೋದನು, ಅವನಿಂದ ನಿಜವನ್ನರಿಯುವದಾಗಲಿಲ್ಲ ; ಆಮೇಲೆ ವಾಯುವು ಹೋದನು. ಅವನಿಂದಲೂ ಅದನ್ನರಿಯುವದಾಗಲಿಲ್ಲ.

ಅಗ್ನಿಯು ದೇವತೆಗಳಿಗೆ ಅಗ್ರಗಾಮಿ, ಮುಂದಾಳು. ಆತನಿಂದಲೇ ದೇವತೆಗಳಿಗೆ ಸಲ್ಲತಕ್ಕ ಹವಿರ್ಭಾಗವು ದೊರಕತಕ್ಕದ್ದು. ಅವನು ಜಾತವೇದನು ; ಯಾವ ಕರ್ಮವು ನಡೆದರೂ ಅದಕ್ಕೆ ಅಗ್ನಿಯು ಸಾಕ್ಷಿಯಾಗಿರುವದರಿಂದ ಆತನಿಗೆ ಅರಿಯದಂತೆ ಆಗಬಹುದಾದ ಕರ್ಮವೇ ಇಲ್ಲ. ಇದಲ್ಲದೆ ಅಗ್ನಿಯು ವಾಕ್ಕಿನ ಅಧಿದೇವತೆಯು ; ಜನರು ಯಾವ ಸಂಕಲ್ಪವನ್ನು ಮಾಡಿ ಏನು ಮಾತಾಡಬೇಕಾದರೂ ಅಗ್ನಿಯ ಸಹಾಯವು ಬೇಕು. ಇಂಥ ಸರ್ವಜ್ಞಕಲ್ಪನವನು. ಇನ್ನು ಶಕ್ತಿಯನ್ನು ಲೆಕ್ಕಕ್ಕೆ ತೆಗೆದುಕೊಂಡರೂ ಅವನು ಸರ್ವಶಕ್ತನಂತಿರುವನು. ತೇಜೋಮಯನಾದ ಅವನ ತಾಪದಿಂದಲೇ ಸಕಲವೂ ಪಕ್ವವಾಗುವದು. ಅವನ ತಾಪವು ಕಡಿಮೆಯಾಯಿತೆಂದರೆ ಪ್ರಾಣಿಗಳ ಔಷ್ಣ್ಯವು ಕಡಿಮೆಯಾಗಿ ಅವು ಒಣಕಲಾಗಿಬಿಡುವವು, ಅದು ಸ್ವಲ್ಪ ಹೆಚ್ಚಾಯಿತೆಂದರೆ ಕಳವಳಪಡುವವು, ತೀರ ಹೆಚ್ಚಾದರೆ ಸೀಕಲಾಗಿ ಹೋಗುವವು, ಇಂಥ ಮಹಾಮಹಿಮನವನು ! ಆದರೇನು ? ಎಲ್ಲರಿಗೂ ಆತ್ಮನಾಗಿರುವ ಪರಮೇಶ್ವರನ ಮುಂದೆ ಅವನ ಆಟವೆ ? ಪರಮೇಶ್ವರನ ತೇಜಸ್ಸೇ ಅಗ್ನಿಯ ತೇಜಸ್ಸು ; ಆತನ ಮಹಿಮೆಯೇ ಅಗ್ನಿಯ

ಮಹಿಮೆಯು. ಪರಮಾತ್ಮನಿಗಿಂತ ತಾನು ಬೇರೆಯಾಗಿ ವ್ಯಕ್ತಿಯಾಗಿರುವೆನೆಂದೂ ಅವನು ಯಾವಾಗ ಅಜ್ಞಾನದಿಂದ ಹೆಮ್ಮೆಪಟ್ಟನೋ ಆ ಕೂಡಲೆ ಅವನ ಜ್ಞಾನವೂ ಶಕ್ತಿಯೂ ಕುಂಠಿತವಾದವು. ಪರಮೇಶ್ವರನು ಅವನ ಮುಂದಿಟ್ಟ ಒಂದು ಹುಲ್ಲುಕಡ್ಡಿಯನ್ನು ಕೂಡ ಸುಡುವದು ಅವನಿಂದ ಆಗದೆಹೋಯಿತು.

ವಾಯುವು ಅಗ್ನಿಯ ಗೆಳೆಯನು. ಅವನು ಅಂತರಿಕ್ಷದಲ್ಲಿಯೂ ಭೂಮಿಯಲ್ಲಿಯೂ ಸಂಚರಿಸುತ್ತಿರುವದರಿಂದಲೇ ಅಗ್ನಿಗೆ ಪ್ರೋತ್ಸಾಹವಾಗುವದು. ಜೀವರು ಪ್ರಾಣಿಗಳೆನಿಸಿಕೊಳ್ಳುವದಕ್ಕೆ ಪ್ರಾಣರೂಪದಿಂದ ವಾಯುವು ಅವರ ಕಾರ್ಯಕರಣಗಳಲ್ಲಿ ಸಂಚರಿಸುತ್ತಿರುವದೇ ಕಾರಣವು. ಸದಾಗತಿಯಾದ ವಾಯುವಿನ ಸಂಚಾರವು ಸ್ವಲ್ಪ ಕಡಿಮೆಯಾದರೆ ಅಗ್ನಿಯ ವ್ಯಾಪಾರವು ಕಡಿಮೆಯಾಗಿ ಪ್ರಾಣಿಗಳು ಕೃಶರಾಗುವರು ; ಆತನು ಬಲವಾಗಿ ಬೀಸಿದನೆಂದರೆ ಎಂಥ ಭಾರವಾದ ವಸ್ತುವನ್ನಾದರೂ ಹಾರಿಸಿಕೊಂಡುಹೋಗಿಬಿಡುತ್ತಾನೆ. ಕಲ್ಪಾಂತದಲ್ಲಿ ವಾಯುವೂ ಅಗ್ನಿಯೂ ಚುರುಕಾಗಿ ಕೆಲಸಮಾಡುವದರಿಂದಲೇ ಲೋಕದ ತೇವವೆಲ್ಲವೂ ಒಣಗಿ ಪ್ರಾಣಿಗಳೂ ವಸ್ತುಗಳೂ ಸುಟ್ಟು ಬೂದಿಯಾಗುವವು. ಇಂಥ ಮಹಾಮಹಿಮೆಯವನು ವಾಯು ! ಆದರೇನು ? ಸರ್ವಶಕ್ತನಾದ ಸರ್ವರಿಗೂ ಸರ್ವಕಾರ್ಯಕರಣಗಳಿಗೂ ವ್ಯಾಪಾರವನ್ನು ಅನುಗ್ರಹಿಸಬಲ್ಲ ಪರಮಾತ್ಮನ ಮುಂದೆ ಅವನ ಆಟವೇನು ಸಾಗುವದು ? ಆ ಪರಮೇಶ್ವರನ ಶಕ್ತಿಯೇ, ವಾಯುವಿನ ವ್ಯಾಪಾರವಾಗಿರುವದು ; ಆತನಿತ್ತ ಬಲದಿಂದಲೇ ವಾಯುವು ತನ್ನ ಅದ್ಭುತಕಾರ್ಯಗಳನ್ನು ನೆರವೇರಿಸುತ್ತಿರುವನು. ಈ ಗುಟ್ಟನ್ನರಿಯದೆ ಪರಮಾತ್ಮನಿಗಿಂತ ತಾನೇ ಬೇರೆಯಾಗಿದ್ದುಕೊಂಡು ತನ್ನ ವ್ಯಕ್ತಿತ್ವದಿಂದಲೇ ಈ ಲೋಕವನ್ನೆಲ್ಲ ಚಂಡಿನಂತೆ ಆಡಿಸುತ್ತಿರುವೆನೆಂಬ ಅಜ್ಞಾನದ ಹೆಮ್ಮೆಯು ವಾಯುವಿನಲ್ಲಿ ಮೊಳೆಯಿತೋ ಇಲ್ಲವೋ, ಕೂಡಲೆ ಅವನ ಜ್ಞಾನವೂ ಬಲವೂ ಮಾಯವಾದವು. ಪರಮೇಶ್ವರನು ಅವನ ಮುಂದಿಟ್ಟ ಒಂದು ಹುಲ್ಲುಕಡ್ಡಿಯನ್ನು ಕೂಡ ವಾಯುವು ಅಲುಗಾಡಿಸಲಾಗದೆ ಹೋದನು !

ಮೇಲೆ ಕೊಟ್ಟಿರುವ ಅಗ್ನಿವಾಯುಗಳ ದೃಷ್ಟಾಂತವು ಜೀವಲೋಕಕ್ಕೆಲ್ಲ ಉಪಲಕ್ಷಣವಾಗಿರುತ್ತದೆ. ಏಕೆಂದರೆ ಜೀವರುಗಳು ಎಷ್ಟೇ ಗಾತ್ರದ ಎಷ್ಟೇ ಗಟ್ಟಿಯಾದ ಬಲವಾದ ಶರೀರವನ್ನು ಧರಿಸಿರಲಿ, ಎಂಥ ಪಟುವಾದ ಕರಣಕಲಾಪವನ್ನು ಸಂಪಾದಿಸಿಕೊಂಡಿರಲಿ, ಅವರ ಜ್ಞಾನೇಚ್ಛಾಕ್ರಿಯಾಶಕ್ತಿಗಳ ಮೂಲದ್ದ ಬಲದಿಂದಲೇ ಅವರು ಸಕಲವ್ಯವಹಾರಗಳನ್ನೂ ನೆರವೇರಿಸುತ್ತಿರುವರೆಂಬುದು ಸ್ಪಷ್ಟವಾಗಿರುತ್ತದೆ. ಈ ಮೂಲವಾದ ಜ್ಞಾನೇಚ್ಛಾಕ್ರಿಯಾಶಕ್ತಿಗಳೆಂಬಿವು ನಿಜವಾಗಿ ಜ್ಞಾನಸ್ವರೂಪನೂ ಸತ್ತಾಸ್ವರೂಪನೂ ಆದ ಪರಮೇಶ್ವರನೆಂಬ ಪ್ರಚಂಡಸೂರ್ಯನಿಂದ ಹೊರಹೊಮ್ಮುವ ಕಿರಣಗಳಾಗಿರುತ್ತವೆ. ಆ ಸೂರ್ಯನನ್ನು ಬಿಟ್ಟು ಇತ್ತಸರಿದರೆ ಯಾರಾದರೇನು? ಕೂಡಲೆ ಅವರನ್ನು ಕತ್ತಲೆಯು ಮುಸುಕಿ

ಕೊಳ್ಳುವದು. ಅವರ ಮನಃಶಕ್ತಿಯು ಕುಗ್ಗಿಹೋಗುವದು, ಅವರ ಇಚ್ಛಾಶಕ್ತಿಗಳು ದುರ್ಬಲವಾಗಿ ಮುರುಟಿಕೊಳ್ಳುವವು, ಎಲ್ಲಾ ಜೀವರುಗಳ ಕಾರ್ಯಕರಣಗಳಿಗೆ ಬಲವನ್ನು ನೀಡುವ ಅಗ್ನಿಗೂ ಅಗ್ನಿಯಾಗಿ ವಾಯುವಿಗೂ ವಾಯುವಾಗಿ ತನ್ನ ಸನ್ನಿಧಿಮಾತ್ರದಿಂದಲೇ ಅಗ್ನ್ಯಾದಿದೇವತೆಗಳನ್ನು ತಮ್ಮ ತಮ್ಮ ವ್ಯಾಪಾರದಲ್ಲಿ ತೊಡಗಿಸುತ್ತಿರುವ ಆ ಸರ್ವಜ್ಞಸರ್ವಶಕ್ತನ ಅನುಗ್ರಹವಿಲ್ಲದಿದ್ದರೆ ಅತ್ಯಲ್ಪವೀರ್ಯರಾದ ನಮ್ಮಂಥವರ ಪಾಡೇನು? ಆ ಮಹಾಮಹಿಮನ ಚೈತನ್ಯದ ಬಲವಿಲ್ಲದೆ ಯಾವನು ತಾನೆ ವ್ಯವಹಾರವನ್ನು ಸಾಗಿಸಿಯಾನು? ನೋಡುವದು, ಕೇಳುವದು, ಮುಟ್ಟುವದು, ಮೂಸುವದು, ಕಣ್ಣುರೆಪ್ಪೆಬಡಿಯುವದು, ರೆಪ್ಪೆ ಮುಚ್ಚುವದು, ಶರೀರದಲ್ಲಿರುವ ಆಯಾ ಅವಯವಗಳ ವ್ಯಾಪಾರವನ್ನು ಸಾಗಿಸುವದು, ಒಂದು ಕಡೆಯಿಂದ ಮತ್ತೊಂದು ಕಡೆಗೆ ಚಲಿಸುವದು, ನಮಗೆ ಬೇಕಾದ ಆಯಾ ವಸ್ತುಗಳನ್ನು ತೆಗೆದುಕೊಳ್ಳುವದು, ಭೋಗಿಸುವದು, ತೃಪ್ತಿಪಡುವದು, ಬೇಡವಾದ ಆಯಾ ವಸ್ತುಗಳನ್ನು ತೊಲಗಿಸಿಕೊಳ್ಳುವದು, ಅದರಿಂದ ಮನಸ್ಸಿನಲ್ಲಿ ಸಮಾಧಾನವನ್ನು ಪಡೆದುಕೊಳ್ಳುವದು– ಇಂಥ ಯಾವ ವ್ಯಾಪಾರವು ತಾನೇ ಎಲ್ಲಕ್ಕೂ ಇರವನ್ನೂ ತೋರಿಕೆಯನ್ನೂ ಅನುಗ್ರಹಿಸುವ ಆತನ ಬಲವಿಲ್ಲದೆ ನೆರವೇರೀತು?

ಅಗ್ನಿವಾಯುಗಳಿಗೆ ತಾವು ಮಹಾಬಲರೆಂದೂ ಎಲ್ಲರಿಗೂ ತಮ್ಮ ಅನುಗ್ರಹದಿಂದಲೇ ಕಾರ್ಯಸಿದ್ಧಿಗಳು ಆಗುವವೆಂದೂ ನ್ದದ್ದು ಈಗ ಕ್ಷಣಮಾತ್ರದಲ್ಲಿ ಭಂಗವಾಗಿಹೋಯಿತು. ಯಾವದೋ ಒಂದು ಮಹಾಭೂತವಿದೆ, ಅದು ಯಾರ ಸತ್ತ್ವವನ್ನು ಬೇಕಾದರೂ ಇದ್ದಕ್ಕಿದ್ದಹಾಗೆಯೇ ಹೀರಿಕೊಂಡುಬಿಡಬಲ್ಲದು, ಅದರ ಮುಂದೆ ನಮ್ಮಗಳ ಆಟವು ಏನೇನೂ ಸಾಗದು– ಎಂಬ ಅರಿವು ಅವರಿಗೆ ಮನದಟ್ಟಾಯಿತು. ಅಲ್ಪಪ್ರಜ್ಞರೂ ಅಲ್ಪವೀರ್ಯರೂ ಆದ ನಮ್ಮಗಳಿಗೆ ಈ ಕಥೆಯಿಂದ ಈ ವಿಷಯವು ಮನವರಿಕೆಯಾಗಬೇಕೆಂಬುದು ಶ್ರುತಿಯ ಉದ್ದೇಶವು. ನಾನೇನೂ ಸಾಮಾನ್ಯನಲ್ಲ, ಜನರೆಲ್ಲರೂ ನಾನು ಹೇಳಿದಂತೆ ಕೇಳುತ್ತಾರೆ, ನನ್ನ ಭ್ರೂಭಂಗಮಾತ್ರದಿಂದ ಜನರ ನಿಗ್ರಹಾನುಗ್ರಹಗಳು ಆಗುತ್ತವೆ–ಎಂದು ಮೆರೆಯುವ ಒಣಹೆಮ್ಮೆಗೆ ವಶರಾಗುವದು ಎಂಥ ನಗೆಗೀಡಾದದ್ದೆಂಬುದು ಇದರಿಂದ ನಮಗೆ ಚೆನ್ನಾಗಿ ಗೊತ್ತಾಗಬೇಕು. ಅಗ್ನಿವಾಯುಗಳಂಥವರು ಕೂಡ ಪರಮೇಶ್ವರನ ಶಕ್ತಿಯಿಂದಲೇ ತಮ್ಮ ತಮ್ಮ ವ್ಯಾಪಾರವನ್ನು ಮಾಡುತ್ತಿರುವರೆಂದೂ ಆತನಿಂದ ಪರಾಙ್ಮುಖರಾದಾಗ ಅವರಿಂದ ಒಂದು ಹುಲ್ಲುಕಡ್ಡಿಯನ್ನು ಕೂಡ ಅಲುಗಾಡಿಸುವದಾಗದೆಂದೂ ಮನದಂದುಕೊಂಡರೆ ನಮ್ಮೆಲ್ಲೆಲ್ಲ ಹಾಸುಹೊಕ್ಕಾಗಿರುವ ಪರಮೇಶ್ವರನ ದಿವ್ಯಶಕ್ತಿಯ ಹೆಚ್ಚುಗಾರಿಕೆಯು ನಮ್ಮ ಮನದಲ್ಲಿ ಬಿಂಬಿಸುತ್ತದೆ. ಆತನಿತ್ತ ಬಲದಿಂದ ಆತನ ಸೇವೆಯನ್ನು ಮಾಡಿ ಆತನ ಅನುಗ್ರಹದಿಂದ ನಮ್ಮ ಸ್ವರೂಪವನ್ನರಿತುಕೊಂಡು ಎಲ್ಲಾ ವಿಧವಾದ ಅನರ್ಥದಿಂದಲೂ ಪಾರಾಗಿ ಆನಂದಪಡಬೇಕೆಂಬ ತತ್ತ್ವವೂ ಮನಸ್ಸಿಗೆ ಹಿಡಿಯುತ್ತದೆ.

———

# ೧೦. ಬ್ರಹ್ಮಜ್ಞಾನದ ಮಹಿಮೆ

ಅಥೇನ್ದ್ರಮಬ್ರುವನ್ ಮಘವನ್ನೇತದ್ವಿಜಾನೀಹಿ
ಕಿಮೇತದ್ಯಕ್ಷಮಿತಿ ತಥೇತಿ ತದಭ್ಯದ್ರವತ್ ತಸ್ಮಾತ್
ತಿರೋದಧೇ ॥ ೧ ॥

ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ ಬಹುಶೋಭಮಾನಾಮು-
ಮಾಗ್ಂ ಹೈಮವತೀಂ ತಾಗ್ಂ ಹೋವಾಚ ಕಿಮೇತದ್ಯಕ್ಷಮಿತಿ ॥೨॥

(ಚತುರ್ಥಃ ಖಂಡಃ)

ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ
ಮಹೀಯಧ್ವಮಿತಿ ತತೋ ಹೈವ ವಿದಾಞ್ಚಕಾರ ಬ್ರಹ್ಮೇತಿ॥೧॥
ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್ ದೇವಾನ್
ಯದಗ್ನಿರ್ವಾಯುರಿನ್ದ್ರಸ್ತೇಹ್ಯೇನನ್ನೇದಿಷ್ಠಂ ಪಸ್ಪೃಶುಸ್ತೇ
ಹ್ಯೇನತ್ ಪ್ರಥಮೋ ವಿದಾಞ್ಚಕಾರ ಬ್ರಹ್ಮೇತಿ
ತಸ್ಮಾದ್ವಾ ಇನ್ದ್ರೋಽತಿತರಾಮಿವಾನ್ಯಾನ್ ದೇವಾನ್
ಸ ಹ್ಯೇನನ್ನೇದಿಷ್ಠಂ ಪಸ್ಪರ್ಶ ಸ ಹ್ಯೇನತ್ ಪ್ರಥಮೋ
ವಿದಾಞ್ಚಕಾರ ಬ್ರಹ್ಮೇತಿ ॥ ೩ ॥

"ಆಮೇಲೆ ಇಂದ್ರನನ್ನು ಕುರಿತು 'ಮಘವಂತನೆ, ಇದು ಯಾವ ಯಕ್ಷರೂಪವೆಂಬುದನ್ನು ತಿಳಿದುಕೊಂಡು ಬಾ' ಎಂದರು; ಹಾಗೇ ಆಗಲೆಂದು ಅದರ ಬಳಿಗೆ ಹೋಗಲು ಬ್ರಹ್ಮವು ಅವನಿಗೆ ಕಾಣದಂತೆ ಮರೆಯಾಯಿತು. ಅವನು ಆಕಾಶದಲ್ಲಿ ಒಬ್ಬ ಸ್ತ್ರೀಯನ್ನು ಕಂಡನು; ಆಕೆಯೇ ಹೈಮವತಿಯಾದ ಉಮೆಯು. 'ಆಕೆಯನ್ನು ಇದು ಯಾವ ಬ್ರಹ್ಮರೂಪವು?' ಎಂದು ಕೇಳಲು ಆಕೆಯು 'ಇದು ಬ್ರಹ್ಮವು. ಬ್ರಹ್ಮದ ವಿಜಯದಿಂದಲೇ ಹೀಗೆ ನಿಮಗೆ ಮಹಿಮೆಯುಂಟಾಯಿತು' ಎಂದಳು. ಆಗ ಅವನು 'ಇದು ಬ್ರಹ್ಮವು' ಎಂದು ಅರಿತುಕೊಂಡನು.

ಆದ್ದರಿಂದಲೇ ಅಗ್ನಿ, ವಾಯು, ಇಂದ್ರ- ಎಂಬ ಈ ದೇವತೆಗಳು ಮಿಕ್ಕವರಿಗಿಂತ ಹೆಚ್ಚಿನವರಾಗಿರುವರು; ಏಕೆಂದರೆ ಅವರೇ ಈ ಬ್ರಹ್ಮವನ್ನು ಹತ್ತಿರ ಬಂದು ಮುಟ್ಟಿದರು, ಅವರೇ ಮೊದಲು 'ಇದು ಬ್ರಹ್ಮವು' ಎಂದರಿತುಕೊಂಡರು. ಆದ್ದರಿಂದಲೇ ಇಂದ್ರನು ಮಿಕ್ಕ ದೇವತೆಗಳಿಗಿಂತಲೂ ಹೆಚ್ಚಿನವನಾದನು; ಏಕೆಂದರೆ ಆತನೇ ಈ ಬ್ರಹ್ಮವನ್ನು ಹತ್ತಿರ ಬಂದು ಮುಟ್ಟಿದನು, ಅವನೇ ಮೊದಲು 'ಇದು ಬ್ರಹ್ಮವು' ಎಂದು ಅರಿತುಕೊಂಡನು!

ದೇವತೆಗಳಲ್ಲೆಲ್ಲ ಇಂದ್ರನೇ ಹೆಚ್ಚಿನವನು ; 'ಭೋಗದಲ್ಲಿ ಇಂದ್ರ' ಎಂಬ ಗಾದೆಯಂತೆ ಇಂದ್ರನಿಗೆ ಇರುವ ಭೋಗಸಾಮಗ್ರಿಗಳ ರಾಶಿಯು ನಿಶ್ಚಯ ವಾಗಿಯೂ ಅಭಿಮಾನಕ್ಕೆ ಕಾರಣವಾಗಿರುತ್ತದೆ. ದೇವತೆಗಳ ಒಡೆಯನಾದ ಇಂದ್ರನಿಗೆ ಅಳವಾಗದಿರುವದು ಯಾವದೇ ಆಗಲಿ, ಮಿಕ್ಕವರಿಗೆ ಎಂದಿಗೂ ಕೈವಶವಾಗಲಾರದೆಂದು ಧಾರಾಳವಾಗಿ ಹೇಳಿಬಿಡಬಹುದು. ಅಗ್ನಿವಾಯುಗಳಿಗೆ ತಿಳಿಯದಿದ್ದದ್ದು ಇಂದ್ರನಿಗೇಕೆ ತಿಳಿಯಬಾರದು ? ಆದ್ದರಿಂದ ಇಂದ್ರನೇ ಈ ಯಕ್ಷರೂಪದ ನಿಜವನ್ನು ಅರಿತುಕೊಂಡು ಬರಲಿ– ಎಂದು ದೇವತೆಗಳು ಆತನನ್ನು ಆ ಕೆಲಸಕ್ಕೆ ಕಳುಹಿಸಿಕೊಟ್ಟದ್ದು ಸ್ವಾಭಾವಿಕವಾಗಿರುತ್ತದೆ. ಆದರೆ ಪರಮಾತ್ಮನು ಇಂದ್ರನ ವಿಷಯಕ್ಕೆ ತೋರಿಸಿದ ಚರ್ಯೆಯು ಮೊದಲು ನಮಗೆ ಆಶ್ಚರ್ಯ ವನ್ನುಂಟುಮಾಡಬಹುದಾಗಿದೆ. ಇಂಥ ಇಂದ್ರನಿಗೆ ಅಗ್ನಿವಾಯುಗಳಿಗೆ ದೊರೆತ ಸಂಭಾಷಣೆ ಇಲ್ಲದಿದ್ದರೆ ಹೋಗಲಿ, ಪರಮಾತ್ಮನ ಸಗುಣಮೂರ್ತಿಯ ದರ್ಶನವೂ ಇಲ್ಲದಂತೆ ಆದದ್ದೇಕೆ ?

ಇಲ್ಲಿ ಒಂದು ವಿಶೇಷವಿದೆ. ಪರಮಾತ್ಮನು ಯಕ್ಷರೂಪವನ್ನು ಧರಿಸಿ ಕಾಣಿಸಿಕೊಂಡದ್ದು ದೇವತೆಗಳ ಗರ್ವಭಂಗಕ್ಕಾಗಿ. ಇಂದ್ರನು ಅಗ್ನಿವಾಯು ಗಳಂತೆಯೇ ತಾನು ಮಿಕ್ಕ ದೇವತೆಗಳಿಗಿಂತ ಹೆಚ್ಚಿನ ಮಹಿಮೆಯವನೆಂದು ತಿಳಿದುಕೊಂಡದ್ದಲ್ಲದೆ ದೇವತೆಗಳಿಗೆಲ್ಲ ತಾನೇ ಒಡೆಯನೆಂಬ ದುರಾಭಿಮಾನ ವನ್ನೂ ಹೊಂದಿದ್ದನು. ಆದ್ದರಿಂದ ಅಸುರರನ್ನು ಸೋಲಿಸಿದ ಕೀರ್ತಿಯು ತನಗೇ ಸಲ್ಲತಕ್ಕದ್ದೆಂದು ಅವನು ಹೆಮ್ಮೆಪಡುವದೂ ಸ್ವಾಭಾವಿಕವಾಗಿತ್ತು. ದೇವತೆಗಳಿಗೆ ಯಾರಿಗೂ ತಪ್ಪುತಿಳಿವಳಿಕೆಯ ಅಭಿಮಾನದ ಸುಳಿವು ಇರಬಾರದು ; ವಿಶೇಷ ವಾಗಿ ದೇವತೆಗಳಿಗೊಡೆಯನಾದ ಇಂದ್ರನಿಗಂತೂ ಇರಲೇಬಾರದು– ಎಂಬ ದಯಾಪೂರಿತವಾದ ಭಾವದಿಂದ ಪರಮೇಶ್ವರನು ಇಂದ್ರನಿಗೆ ಅಭಿಮಾನನಾಶವೂ ಜ್ಞಾನೋದಯವೂ ಕೂಡಲೆ ಆಗಲೆಂಬ ಇಚ್ಛೆಯಿಂದ ಅವನಿಗೆ ದರ್ಶನವನ್ನು ಕೂಡ ಕೊಡದೆ ಮಾಯವಾದನು. ಅದರಂತೆ ಇಂದ್ರನಿಗೆ ಪರಮಾರ್ಥಜ್ಞಾನವಾಗು ವದಕ್ಕೆ ತಕ್ಕ ಸನ್ನಿವೇಶವನ್ನೂ ಒದಗಿಸಿಕೊಟ್ಟನು. ಪರಮಾರ್ಥವಿದ್ಯೆಗೆ ಅಭಿ ಮಾನಿದೇವತೆಯಾದ ಉಮಾದೇವಿಯು ತನ್ನ ಮೂರ್ತಿಯನ್ನು ಅವನಿಗೆ ದರ್ಶನ ಮಾಡಿಸಿದಳು, ಆಕೆಯಿಂದ ಅವನಿಗೆ ತನ್ನೆದುರಿಗೆ ಇದ್ದ ಯಕ್ಷರೂಪವು ಪರ ಮಾತ್ಮನದೇ, ತಮ್ಮ ಜಯದ ಕೀರ್ತಿಯೆಲ್ಲ ಪರಮೇಶ್ವರನಿಗೆ ಸಲ್ಲತಕ್ಕದ್ದೇ– ಎಂಬ ನಿಜವೂ ತಿಳಿಯಬಂತು. ಇದಕ್ಕಿಂತ ಪರಮೇಶ್ವರನು ಮಾಡಬಹುದಾದ ಹೆಚ್ಚಿನ ಅನುಗ್ರಹವು ಯಾವದು ?

ಲೋಕದಲ್ಲಿ ಆಗಾಗ ತಮಗೆ ದುಃಖವು ಒದಗಲಾಗಿ ಜನರು "ಅಯ್ಯೋ, ದೇವರಿಗೆ ಕಣ್ಣಿಲ್ಲ ; ಅದನು ನನಗೇಕೆ ಹೀಗೆ ದುಃಖವನ್ನು ಮತ್ತೆ ಮತ್ತೆ

ಕೊಡುತ್ತಿರುವನು ? ದೇವನು ನಿರ್ದಯನೆಂಬುದೇ ನಿಜವೆಂದು ತೋರುತ್ತದೆ !" ಅನ್ನುವದುಂಟು. ಆದರೆ ದುಃಖವೆಂಬುದು ಹಿಂದೆ ತಾವು ಮಾಡಿದ ಅಸುರಕೃತ್ಯದ ಫಲವಾಗಿದ್ದು ಮತ್ತೆ ಅಂಥ ಕೆಲಸವನ್ನು ಮಾಡುವದಕ್ಕೆ ಹೋಗದಂತೆ ದೇವರು ಕೊಟ್ಟಿರುವ ಎಚ್ಚರಿಕೆಯಾಗಿರುತ್ತದೆ ಎಂಬುದನ್ನಾಗಲಿ, ಆ ದುಃಖವನ್ನೇ ಸರಿಯಾಗಿ ಉಪಯೋಗಿಸಿಕೊಂಡರೆ ಮುಂದೆ ತಮ್ಮ ಅಭ್ಯುದಯನಿಃಶ್ರೇಯಸಗಳಿಗೆ ತಕ್ಕ ಮಾರ್ಗವನ್ನು ಕಂಡುಕೊಳ್ಳುವ ಸಾಧನವಾಗಬಹುದೆಂಬುವನ್ನಾಗಲಿ ಆ ಅವಿವೇಕಿಗಳು ಹೇಗೆ ಅರಿತುಕೊಂಡಾರು ? ಸಚ್ಛಾಸ್ತ್ರಶ್ರವಣದಿಂದಲೂ ಸತ್ಪುರುಷರ ಸಂಗದಿಂದಲೂ ಈ ನಿಜವನ್ನು ಅರಿತುಕೊಂಡರೆ ದುಃಖವೆಂಬುದು ನಮಗೆ ಸರಿಯಾದ ಮಾರ್ಗವನ್ನು ತೋರಿಸುವ ಮಾರ್ಗದೀಪಿಕೆಯಾಗಿರುವದೆಂಬುದು ಕೂಡಲೆ ಕಂಡುಬರುತ್ತದೆ. ಇಂದ್ರಾದಿಗಳಿಗೂ ಉಮಾದೇವಿಯ ಅನುಗ್ರಹದಿಂದ ಈ ತಿಳಿವಿನ ಕಣ್ಣು ಈಗ ತೆರೆಯಿತು. ತಮಗೆ ಆಗಿದ್ದ ದುರಭಿಮಾನವನ್ನು ಹುಟ್ಟಡಗಿಸುವದಕ್ಕೆ ಪರಮೇಶ್ವರನು ಒಂದಾನೊಂದು ಅದ್ಭುತರೂಪವನ್ನು ಕೈಗೊಂಡದ್ದು ಎಂಥ ದಯಾರಸದ ಸೋನೆಯೆಂಬುದು ಅವರಿಗೆ ಮನವಟ್ಟಾಯಿತು.

ಯಾರು ಯಾರು ಶರೀರವೇ ಮುಂತಾದ ಉಪಾಧಿಗಳ ಮತ್ತು ಅವಕ್ಕೆ ಸೇರಿರುವ ಬಾಹ್ಯವಸ್ತುಸಂಪತ್ತಿನ ಅಭಿಮಾನವನ್ನು ತೊರೆದು ಪರಮಾತ್ಮನ ಮಹಿಮೆಯೇ ಇದೆಲ್ಲವೂ ಎಂಬುದನ್ನು ಕಂಡುಕೊಳ್ಳುವರೋ ಅವರೇ ಪರಮಾತ್ಮನ ನಿಜವನ್ನು ಅರಿತವರು. ಅಥವಾ ಯಾರು ಯಾರು ಪರಮಾತ್ಮನ ನಿಜವನ್ನರಿತವರೋ ಅವರಿಗೇ ಅನಾತ್ಮದ ಸುತ್ತುಗಟ್ಟಿನಲ್ಲಿ ನಾನು, ನನ್ನದು-ಎಂಬ ಅಭಿಮಾನವು ತೊಲಗುವದು, ಹೊರಗಿನ ವಿಷಯಗಳಲ್ಲಿರುವ ಅಭಿಮಾನದಿಂದ ಇಂದ್ರಿಯಗಳಿಂದ ಅವನ್ನು ಸೋಂಕಿ ಸುಖವನ್ನುಪಭೋಗಿಸುವ ಬಗೆಗೆ 'ವಿಷಯಸ್ಪರ್ಶ' ಎಂಬ ಹೆಸರನ್ನು ಕೊಟ್ಟರೆ ವಿಷಯಗಳಿಂದ ಹಿಮ್ಮೆಟ್ಟಿ ಪರಮಾತ್ಮನ ನಿಜವನ್ನರಿತು ಆನಂದಿಸುವ ಬಗೆಗೆ 'ಬ್ರಹ್ಮಸ್ಪರ್ಶ' ಎಂದು ಹೆಸರಿಡಬಹುದು. ದೇವತೆಗಳಲ್ಲೆಲ್ಲ ಇಂದ್ರನಿಗೆ ಮೊಟ್ಟಮೊದಲು ಈ 'ಬ್ರಹ್ಮಸ್ಪರ್ಶ'ವು ದೊರೆಯಿತು ; ಆದರಿಂದಲೇ ಅವನು ಇಂದ್ರನೆನಿಸಿಕೊಂಡನು. ಅವನು ತಿಳಿಸಿಕೊಟ್ಟಮೇಲೆ ಅಗ್ನಿವಾಯುಗಳಿಗೆ ಈ 'ಸ್ಪರ್ಶ'ವು ದೊರೆಯಿತು; ಆದ್ದರಿಂದಲೇ ಅವರು ಮಿಕ್ಕ ದೇವತೆಗಳಿಗಿಂತಲೂ ಹೆಚ್ಚಿನವರೆನಿಸಿಕೊಂಡರು

ದೇವಾಸುರರ ಸಂಗ್ರಾಮದ ಕಥೆಯಿಂದ ನಾವು ತಿಳಿದುಕೊಳ್ಳಬೇಕಾದದ್ದೇನೆಂಬುದನ್ನು ಇಲ್ಲಿ ವಿಚಾರಿಸುವದು ಅವಶ್ಯವು. ಮನುಷ್ಯನು ರಾಜಸ ತಾಮಸ ಗುಣಗಳನ್ನವಲಂಬಿಸಿ ಆಸುರಸಂಪತ್ತನ್ನೂ ರಾಕ್ಷಸಸಂಪತ್ತನ್ನೂ ಬೆಳೆಯಿಸಿಕೊಳ್ಳಬಹುದು. ಆಗ ಅವನನ್ನು ಕಂಡು ಜನರು ಹೆದರುವರು, ಅವನ ಕಾರ್ಯಗಳು ಸಂಕಲ್ಪಬಲದಿಂದ ಕೆಲವು ಕಾಲದವರೆಗೆ ಕೈಗೂಡುವವು. ಅವನಿಗೆ

ಇಹಲೋಕದ ಭೋಗವೂ ದೊರೆಯಬಹುದು. ಆದರೆ ನಾನು ಸ್ವತಂತ್ರನು, ನಾನು ಭೋಗಿಯು, ಸಿದ್ಧನು, ಬಲವಂತನು, ಸುಖಿಯು–ಎಂದು ಹೆಮ್ಮೆಪಡುವ ಈ ಸ್ಥಿತಿಯು ಬಹುಕಾಲ ನಿಲ್ಲಲಾರದು. ಈ ಆಸುರಸಂಪತ್ತಿನಲ್ಲಿ ವಿರಕ್ತಿಯನ್ನು ಹೊಂದಿದವನು ಸಾತ್ತ್ವಿಕಗುಣವನ್ನವಲಂಬಿಸಿ ದೈವಸಂಪತ್ತನ್ನು ಪಡೆದುಕೊಳ್ಳ ಬಹುದು. ಆಗ ಅವನಿಗೆ ಪರಮೇಶ್ವರನ ಅನುಗ್ರಹದಿಂದ ಇಹಲೋಕದಲ್ಲಿ ಸುಖವೂ ಪರಲೋಕದಲ್ಲಿ ಸದ್ಗತಿಯೂ ದೊರೆಯುವದಕ್ಕೆ ಬೇಕಾದ ಅನುಕೂಲ್ಯ ವು ಉಂಟಾಗುವದು. ಆದರೆ ಅಂಥ ಸಾತ್ತ್ವಿಕಸುಖವನ್ನು ಕೂಡ ಅಹಂಕಾರ ದಿಂದ ಅನುಭವಿಸುವದಕ್ಕಿಂತ ಅದರ ಮೇಲಿನ ಅಂತಸ್ತಿನ ಬ್ರಹ್ಮಾನಂದವನ್ನು ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸುವವನೂ ಮತ್ತೂ ವಿವೇಕಿಯು. ಸಾತ್ತ್ವಿಕ ಸ್ಥಿತಿಯಲ್ಲಿಯೂ ರಜೋಗುಣತಮೋಗುಣಗಳ ಒಂದಿಷ್ಟು ಬೆರಕೆಯಿದ್ದರೆ ಹೊರ ಗಡೆಯ ವಿಷಯಗಳಕಡೆಗೇ ಬುದ್ಧಿಯು ಹರಿಯುತ್ತಿರುತ್ತದೆ ; ತಾನು ಮಾಡುವ ಸಾತ್ತ್ವಿಕಸಾಧನಗಳಿಂದಲೇ ಈ ಸುಖವನ್ನು ಸಂಪಾದಿಸಿಕೊಂಡೆನೆಂಬ ಅಭಿ ಮಾನವು ಮೈದೋರುತ್ತದೆ. ಈ ಬಗೆಯ ಮಿಶ್ರಸುಖವನ್ನೇ ಇಂದ್ರಾದಿಗಳು ಅಸುರರನ್ನು ಜಯಿಸಿದಾಗ ಪಡೆದುಕೊಂಡದ್ದು. ಸಾತ್ತ್ವಿಕರಿಗೂ ಸಂಕಟವಾಗು ವದೇಕೆ ?–ಎಂಬುದಕ್ಕೆ ಇಲ್ಲಿ ಉತ್ತರವು ದೊರೆಯುತ್ತದೆ. ಸಾತ್ತ್ವಿಕರಲ್ಲಿ ರಾಜಸತಾಮಸವಾಸನೆಗಳ ಬೆರಕೆಯಾಗಿರುವಾಗ ಅವುಗಳನ್ನು ಕಳೆಯುವದಕ್ಕೆ ಪರಮೇಶ್ವರನು ಏರ್ಪಡಿಸಿರುವ ಪ್ರಕೃತಿನಿಯಮದಿಂದ ಅವರಿಗೂ ದುಃಖವಾಗು ತ್ತದೆ. ಆದರೆ ಆ ದುಃಖದ ನಿಜವನ್ನರಿತುಕೊಂಡರೆ ಬಲು ಬೇಗನೆ ಅದನ್ನು ದಾಟಬಿಡಬಹುದು, ಏಕೆಂದರೆ ಕಡಿಮೆಯ ಬೆಲೆಯ ಕೀಳುಲೋಹವನ್ನು ಸೇರಿ ಸಿದ ಬಂಗಾರವನ್ನು ಬೆಂಕಿಯಲ್ಲಿ ಪುಟವಿಟ್ಟು ಕರಗಿಸಿದಾಗ ಅದು ಕಲ್ಮಷವನ್ನು ಬಿಟ್ಟು ಚೊಕ್ಕಚಿನ್ನವಾಗುವಂತೆ ಸಾತ್ತ್ವಿಕರು ತಮ್ಮ ದುಃಖಕ್ಕೆ ಕಾರಣವೆಲ್ಲ ಅಭಿಮಾನವೇ ಎಂಬುದನ್ನು ಕಂಡುಕೊಂಡು ಪರಮೇಶ್ವರನನ್ನು ಶರಣುಹೊಕ್ಕರೆ ಕೂಡಲೆ ಅವರ ದುಃಖವು ಮಾಯವಾಗುವದು. ಶುದ್ಧಸತ್ತ್ವದ ಬಲದಿಂದ ಅವರಿಗೆ ಪರಮೇಶ್ವರನ ಸ್ವರೂಪದ ಜ್ಞಾನವು ಉದಯಿಸುವದು ; ಅದರಿಂದ ನಿರತಿಶಯವಾದ ಬ್ರಹ್ಮಾನಂದವೂ ಪ್ರಾಪ್ತವಾಗುವದು.

ಆದ್ದರಿಂದ ನಿತ್ಯಾನಂದರೂಪವಾದ ಮೋಕ್ಷವನ್ನು ಪಡೆಯಬೇಕೆಂದು ಬಯಸುವವರು ಏನು ಮಾಡಬೇಕು ? ಮೊಟ್ಟಮೊದಲು ಶಾಸ್ತ್ರವಿಹಿತವಾದ ಕರ್ಮವನ್ನು ಸಂಗತ್ಯಾಗಫಲತ್ಯಾಗಪೂರ್ವಕವಾಗಿ ಮಾಡಿ ಪರಮೇಶ್ವರನಿಗೆ ಅರ್ಪಿಸಬೇಕು. ಇದರಿಂದ ಆಸುರಗುಣಗಳು ತೊಲಗುವವು, ದೈವಸಂಪತ್ತು ವಶವಾಗುವದು. ತಮ್ಮ ಸಾಧನದ ಬಲದಿಂದ ಯಾವದೊಂದೂ ತಾನೆ ಫಲಿಸ ಲಾರದೆಂಬುದನ್ನೂ ಪರಮೇಶ್ವರನ ಅನುಗ್ರಹವೇ ಎಲ್ಲಕ್ಕೂ ಮೂಲವೆಂಬುದನ್ನು ಎಂದಿಗೂ ಮರೆಯದೆ ಇರಬೇಕು.

# ೧೧. ಬ್ರಹ್ಮವನ್ನು ಹೇಗೆ ಚಿಂತಿಸಬೇಕು ?

**ತಸ್ಯೈಷ ಆದೇಶೋ ಯದೇತದ್ವಿದ್ಯುತೋ ವ್ಯದ್ಯುತದಾ ।**
**ಇತೀನ್ನ್ಯಮೀಮಿಷದಾ ಇತ್ಯಧಿದೈವತಮ್**
**ಅಥಾಧ್ಯಾತ್ಮಂ ಯದೇತದ್ಗಚ್ಛತೀವ ಚ ಮನೋಽನೇನ ।**
**ಚೈತದುಪಸ್ಮರತ್ಯಭೀಕ್ಷ್ಣಂ ಸಂಕಲ್ಪಃ ॥೫॥**
**ತದ್ಧ ತದ್ವನಂ ನಾಮ ತದ್ವನಮಿತ್ಯುಪಾಸಿತವ್ಯಂ**
**ಸ ಯ ಏತದೇವಂ ವೇದಾಭಿಹೈನಗ್ಂ ಸರ್ವಾಣಿ**
**ಭೂತಾನಿ ಸಂವಾಞ್ಛನ್ತಿ ॥೬॥**

ಆ (ಬ್ರಹ್ಮಕ್ಕೆ) ಇದು ಹೋಲಿಕೆಯು ; 'ಮಿಂಚಿನ ಹೊಳಪಿನಂತೆ, ಕಣ್ಣು ಮಿಟಿಕಿಸಿದಂತೆ' ಎಂದು ಹೇಳುತ್ತಾರಲ್ಲ, ಅದೇ ಹೋಲಿಕೆಯು. ಇದು ಅಧಿದೈವತವು. ಇನ್ನು ಆಧ್ಯಾತ್ಮದ ಹೋಲಿಕೆಯು. ಮನಸ್ಸು ಇದರ ಬಳಿಗೆ ಹೋಗುವಂತಿರುವದು, ಅದರಿಂದ ಇದನ್ನು ಚೆನ್ನಾಗಿ ಸ್ಮರಣೆ ಮಾಡುತ್ತಾನೆ. (ಇದೇ ಅಧ್ಯಾತ್ಮದ ಹೋಲಿಕೆಯು). ಅದು ತದ್ವನ ವೆನಿಸುವದು. ತದ್ವನವೆಂತ ಅದನ್ನು ಉಪಾಸನೆಮಾಡಬೇಕು. ಯಾವಾತನು ಇದನ್ನು ಹೀಗೆಂದು ತಿಳಿಯುವನೋ ಅವನನ್ನು ಎಲ್ಲಾ ಭೂತಗಳೂ ಬಯಸುತ್ತಲಿರುವವು.

ಪರಮಾತ್ಮನು ನಮ್ಮೆಲ್ಲರ ಆತ್ಮನೇ ಆಗಿದ್ದರೂ ವಿವೇಕಬುದ್ಧಿಯಿಲ್ಲದವರಿಗೆ ಆತನು ಎಷ್ಟೋ ದೂರನಾಗಿರುತ್ತಾನೆ ; ಆತನೇ ನಮ್ಮೆಲ್ಲರ ಕಾರ್ಯಕರಣಗಳ ವ್ಯಾಪಾರದ ಮೂಲವಾಗಿದ್ದರೂ ಆತನ ಮಹಿಮೆಯನ್ನು ಅರಿಯಲಾರದೆ 'ನಾವು ಹೀಗೆ ಮಾಡುತ್ತೀವೆ, ಹಾಗೆ ಮಾಡಿದೆವು' ಎಂದು ಮೂಢರು ಹೆಮ್ಮೆಪಡುತ್ತಿರುವರು. ಆದ್ದರಿಂದ ತನ್ನ ಭಕ್ತರ ಉದ್ಧಾರಕ್ಕಾಗಿಯೂ ಗರ್ವಿತರಾದವರ ದರ್ಪವನ್ನು ಮುರಿಯುವದಕ್ಕಾಗಿಯೂ ಆತನು ಸಾಕಾರರೂಪದಿಂದಲೂ ಆಗಾಗ್ಗೆ ತನ್ನನ್ನು ತಾನು ತೋರಿಸಿಕೊಳ್ಳುತ್ತಿರುವನು.

ಆ ಪರಮಾತ್ಮನ ನಿರುಪಾಧಿಕಸ್ವರೂಪವನ್ನು ನಾವು ಅರಿಯಲಾರೆವು. ಆದ್ದರಿಂದ ಆತನನ್ನು ಯಾವದಾದರೊಂದು ಉಪಾಧಿಯ ಬಲದಿಂದ, ಯಾವದಾದರೊಂದು ಹೋಲಿಕೆಯ ಸಹಾಯದಿಂದ, ಮನಸ್ಸಿನಲ್ಲಿ ತಂದಿಟ್ಟುಕೊಳ್ಳಬೇಕು. ಇದಕ್ಕಾಗಿ ಉಪನಿಷತ್ತು ಪರಮೇಶ್ವರನನ್ನು ಅರಿಯುವದಕ್ಕೆ ಸಹಾಯಕವಾಗಿ ಕೆಲವು ದ್ವಾರಗಳನ್ನು ಕಲ್ಪಿಸಿಕೊಡುತ್ತದೆ. ಉದಾಹರಣೆಗೆ ಇಂದ್ರಾದಿ ದೇವತೆಗಳಿಗೆ ಪರಮಾತ್ಮನ ಅರಿವು ಹೇಗಾಯಿತು ? ಅವರು 'ನಾವೇ ಗೆದ್ದೆವು, ಗೆಲವಿನ ಮಹಿಮೆಯು ನಮ್ಮದೇ' ಎಂದು ತಮ್ಮ ತಮ್ಮ ಹೆಚ್ಚುಗಾರಿಕೆಯನ್ನು

ಮದವನ್ನು ಉಬ್ಬುತ್ತಿರುವ ವೇಳೆಗೆ ಅವ್ಯಕ್ತನಾದ ಒಂದು ಯಕ್ಷರೂಪದಿಂದ ಮಿಂಚು ಥಳಾರನೆ ಹೊಳೆಯುವಂತೆ ಅವರ ಮುಂದೆ ಹೊಳೆದನು. ಬರಸಿಡಿಲು ಬಂದಾಗ ಜನರು ಬೆರಗಾಗಿ ಮೈಗರೆಯುವಂತೆ. ದೇವತೆಗಳು ಕೂಡಲೆ ಬೆಪ್ಪಾಗಿ ಬೆರಗಾಗಿ ಅಂಜಿ ಅಳುಕಲಾರಂಭಿಸಿದರು, ಆಮೇಲೆ ಅವರ ದರ್ಪವನ್ನು ದಲನ ಮಾಡಿದ ಕಾರ್ಯವು ಮುಗಿದಕೂಡಲೆ ಮಿಂಚಿನಂತೆ ಆತನು ಮಾಯವಾಗಿ ಬಿಟ್ಟನು, ಆದ್ದರಿಂದ ಪರಮೇಶ್ವರನು ಮಿಂಚಿನಂತೆ ಹೊಳೆಯುವವನು, ಮಿಂಚಿನಂತೆ ಕಣ್ಣು ಮುಚ್ಚಿ ಕಣ್ಣು ಬಿಡುವವರೊಳಗೆ ಅವ್ಯಕ್ತರೂಪವನ್ನು ತಾಳ ಬಲ್ಲವನು, ಮಿಂಚಿನಂತೆ ಯಾವಾಗಬೇಕೆಂದರೆ ಆಗ ಸರೂಪನಾಗಿ ಕಾಣಿಸಿ ಕೊಂಡು ಮತ್ತೆ ಮರೆಯಾಗಬಲ್ಲವನು—ಎಂದು ಆತನನ್ನು ಮನಸ್ಸಿನಲ್ಲಿ ಚಿಂತಿಸ ಬೇಕು. ಇದು ಹೊರಗಿನ ಆಧಿದೈವಿಕದ ಅಂತರಿಕ್ಷದ ಮಿಂಚಿನ- ಹೋಲಿಕೆ ಯಿಂದ ಹೇಳಿದ ಉಪದೇಶವು.

ಇನ್ನು ಆಧ್ಯಾತ್ಮವಾಗಿ, ನಮ್ಮೊಳಗಿನ ಮನಸ್ಸೇ ಹೋಲಿಕೆಯಾಗಿ ಕೊಟ್ಟು ಬ್ರಹ್ಮಸ್ವರೂಪವನ್ನು ತಿಳಿಸಬಹುದು. ಈ ಮನಸ್ಸಿನಲ್ಲಿ ಸಂಕಲ್ಪ ಮಾಡಿದಮಾತ್ರದಿಂದ ಬ್ರಹ್ಮದ ನೆನಪು ನಮಗೆ ಆಗುತ್ತದೆ, ಅದನ್ನು ನಮ್ಮ ಮನಸ್ಸು ಮುಟ್ಟಿದಂತೆ ಆಗುತ್ತದೆ. ಮನಸ್ಸು ಎಂಥ ವೇಗವಾಗಿ ಕೆಲಸಮಾಡು ತ್ತದೆ! ಅದು ನಿಜವಾಗಿಯೂ ಮಿಂಚಿಗಿಂತಲೂ ವೇಗವಾದದ್ದು, ಸಂಕಲ್ಪ, ಸ್ಮೃತಿ- ಮುಂತಾದವುಗಳು ಹೇಗೆ ಇದ್ದಕ್ಕಿದ್ದಹಾಗೆಯೇ ಹುಟ್ಟಿ, ತಟ್ಟನೆ ಮೈಗರೆಯುವವೆಂಬುದನ್ನು ನೋಡಿದಾಗ ಅವಕ್ಕೆ ಹೋಲಿಕೆಯನ್ನು ಕೊಡುವ ದಕ್ಕೆ ಹೊರಗಿನ ಪ್ರಪಂಚದಲ್ಲಿ ಯಾವದೊಂದೂ ದೊರೆಯುವದಿಲ್ಲ. ಈ ಮನಸ್ಸಿನ ಹಿಂಗಡೆಯಲ್ಲಿಯೇ ಇದ್ದು ಇದಕ್ಕೆ ಎಲ್ಲಾ ಬಲವನ್ನೂ ಕೊಟ್ಟು ಸಂಕಲ್ಪವೃತ್ತಿಗಳನ್ನು ಎಬ್ಬಿಸುವದು, ಒಳಸರಿಯುವದು- ಮುಂತಾದ ವ್ಯಾಪಾರ ಗಳಿಗೆ ಕಾರಣವಾಗಿರುವದೇ ನಮ್ಮ ಆತ್ಮದ ಬ್ರಹ್ಮವು; ಆ ಬ್ರಹ್ಮದ ಚೈತನ್ಯದ ನೆರಳಿನಿಂದಲೇ ಮನಸ್ಸು ಇಂಥ ಅದ್ಭುತಮಹಿಮೆಯುಳ್ಳದ್ದಾಗಿರುತ್ತದೆ. ಈ ಮನಸ್ಸಿನ ಸಂಕಲ್ಪವೇ ಮುಂತಾದವುಗಳಿಂದ ಅದರಲ್ಲಿ ವಿಷಯವಾದಂತೆ ತೋರಿ ಕೊಳ್ಳುವದೇ ಆ ಬ್ರಹ್ಮವು ಎಂದು ಚಿಂತಿಸಬೇಕು.

ಹೊರಗಿನ ಮಿಂಚಿನ ವೇಗದಿಂದಲೂ ಒಳಗಿನ ಮನೋವೇಗದಿಂದಲೂ ಅವುಗಳ ಹಿನ್ನೆಲೆಯಾಗಿರುವ ಬ್ರಹ್ಮದ ಚಿತ್ಪ್ರಕಾಶದ ಮಹಿಮೆಯನ್ನು ಮಂದ ಬುದ್ಧಿಗಳಾದ ಸಾಧಕರು ಅರಿತುಕೊಳ್ಳಬಹುದೆಂದು ತಿಳಿಸಿದ್ದಾಯಿತಷ್ಟೆ. ಆ ಬ್ರಹ್ಮವನ್ನು ವೇಗವಾಗಿರುವ ಪ್ರಕಾಶವಸ್ತುಗಳಿಗೆಲ್ಲ ಜೀವಾಳವೆಂದು ಭಾವಿಸಿ ದರೆ ಅದು ಸದ್ರೂಪವೆಂದೂ ಚಿದ್ರೂಪವೆಂದೂ ನಮ್ಮ ಮನಸ್ಸಿಗೆ ತಟ್ಟುತ್ತದೆ ಯೆಂಬುದೇ ಈ ಉಪದೇಶಗಳ ಉದ್ದೇಶವು. ಆದರೆ ಬ್ರಹ್ಮವನ್ನು ಇನ್ನೊಂದು

ರೂಪದಲ್ಲಿಯೂ ನಾವು ಚಿಂತಿಸಬಹುದು. ಆ ರೂಪವು ನಮಗೆ ಅತ್ಯಂತವಾಗಿ ಬೇಗನೆ ಮನವರಿಕೆಯಾಗುವಂಥದ್ದು. ಹೊರಗಿನ ಮಿಂಚಿನಂಥ ಪ್ರಕಾಶವಸ್ತುಗಳನ್ನು ನಾವು ಮೆಚ್ಚುವಂತೆ ಮಾಡುವದೂ ಒಳಗಿನ ಮನಸ್ಸಿನ ಆಟಕ್ಕೆ ಬೆರಗಾಗುವಂತೆ ಮಾಡಿಸುವದೂ ಯಾವದು ? ಅವುಗಳಲ್ಲಿರುವ ಪ್ರಿಯತ್ವವು. ಅವುಗಳಲ್ಲಿರುವ ಯಾವದೋ ಒಂದು ಗುಣವಿಶೇಷವು ನಮ್ಮನ್ನು ನಾವು ಬೇಡವೆಂದರೂ ತನ್ನ ಕಡೆಗೆ ಸೆಳೆಯುತ್ತದೆ. ಮಿಂಚಿನ ಪ್ರಕಾಶವೂ ವೇಗವೂ ಅವುಗಳ ಹೆಚ್ಚುಗಾರಿಕೆಯ ಹೆಗ್ಗುರುತುಗಳು. ನಿಜವಾಗಿ ಅವುಗಳ ಹೆಚ್ಚುಗಾರಿಕೆಯನ್ನು ಒಂದೇ ಮಾತಿನಲ್ಲಿ ಅಡಕಮಾಡಿದರೆ ಅದನ್ನು 'ಪ್ರಿಯತ್ವ'ವೆಂದು ಕರೆಯಬಹುದು. ಈ ಪ್ರಿಯತ್ವವು ಅವಕ್ಕೆ ಎಲ್ಲಿಂದ ಬಂದಿದೆ ? ಅವುಗಳ ತಿರುಳಾಗಿ ಅವುಗಳ ಆಧಾರವಾಗಿರುವ ಬ್ರಹ್ಮದಿಂದ. ಆದ್ದರಿಂದ ಬ್ರಹ್ಮವು ಅತ್ಯಂತಪ್ರಿಯವಾಗಿರಬೇಕಾಯಿತು. ಯಾವದರ ಆನಂದದ ಬೆರಕೆಯಿಂದಲೇ ಮನಸ್ಸೂ ಮಿಂಚೂ ನಮಗೆ ಪ್ರಿಯವಾಗುವವೋ ಆ ಆನಂದದ ಗಟ್ಟಿಯೇ ಆಗಿರುವ ಆತ್ಮನು ನಮಗೆ ಪ್ರಿಯನೆಂಬುದನ್ನು ಹೇಳಬೇಕಾದದ್ದೇನು ? ಸಮಸ್ತಪ್ರಾಣಿಗಳಿಗೂ ತಾವು ಯಾವದೆಂದು ತಿಳಿದುಕೊಳ್ಳುವವೋ ಅದರ ಮೇಲೆ ಅವುಗಳ ಪ್ರೀತಿಯಿರುತ್ತದೆ. ಮನುಷ್ಯನು ಅವನ ಅಂತಸ್ತಿಗೆ ತಕ್ಕಂತೆ ದೇಹ, ಇಂದ್ರಿಯ, ಪ್ರಾಣ, ಮನಸ್ಸು—ಇವುಗಳನ್ನು ಕ್ರಮಕ್ರಮವಾಗಿ ತನ್ನ ಒಳಗಿನ ಆತ್ಮನೆಂದು ತಿಳಿದುಕೊಳ್ಳುತ್ತಾನೆ ; ಆಗ ಆಯಾ ಆತ್ಮನು ಅವರಿಗೆ ಪ್ರಿಯನಾಗುತ್ತಾನೆ. ಅವರೆ ಇವೆಲ್ಲಕ್ಕೂ ಹಿಂಗಡೆಯಲ್ಲಿದ್ದು ಯಾವ ಆತ್ಮನು ಇವುಗಳ ಮೂಲಕ ತನ್ನ ಮಹಿಮೆಯನ್ನು ಬೀರುತ್ತಿರುವನೋ ಆ ನಿಜವಾದ ಆನಂದಸ್ವರೂಪನಾದ ಪರಮಾತ್ಮನು ಎಂಥ ಪ್ರಿಯನಾಗಿರಬೇಕಾಯಿತು ! ಆದ್ದರಿಂದ ಈ ಆತ್ಮನನ್ನು 'ತದ್ವನ' (ಅವುಗಳಿಗೆ ಬೇಕಾದದ್ದು, ಪ್ರಿಯವಾದದ್ದು) ಎಂಬ ಹೆಸರಿನಿಂದಲೇ ಚಿಂತಿಸಬೇಕು. 'ವನ ಸಂಭಕ್ತೌ' ಎಂಬ ಸಂಸ್ಕೃತಧಾತುವಿಗೆ ಪ್ರೀತಿಸು ಎಂಬ ಅರ್ಥವಿರುವದರಿಂದ ಸೇವಿಸುವದಕ್ಕೆ ಅರ್ಹವಾದ, ಪ್ರೀತಿಸುವದಕ್ಕೆ ಅರ್ಹವಾದ ಆತ್ಮನೇ ತದ್ವನವು—ಆ ಪ್ರಾಣಿಗಳಿಗೆಲ್ಲ ಪ್ರಿಯವಾದದ್ದು.

ಯಾವನು ಆತ್ಮನನ್ನು ಹೀಗೆಂದು ಉಪಾಸನೆಮಾಡುವನೋ ಅವನು ಈ ಅತ್ಯಂತಪ್ರಿಯತಮನಾದ ಆತ್ಮನನ್ನು ಕಂಡುಕೊಳ್ಳುತ್ತಾನೆ. ಅವನಿಗೆ ಆನಂದಸ್ವರೂಪನಾದ ಪರಮಾತ್ಮನೇ ಆತ್ಮನಾಗಿಬಿಡುತ್ತಾನೆ. ಹೇಗೆ ಬ್ರಹ್ಮವು ನಿತ್ಯಾನಂದಸ್ವರೂಪವಾಗಿರುವದರಿಂದ ಎಲ್ಲರಿಗೂ ಬೇಕಾಗಿರುತ್ತದೆಯೋ, ಹೇಗೆ ಎಲ್ಲರೂ ಪರಮೇಶ್ವರನ ಸಾಕ್ಷಾತ್ಕಾರಕ್ಕೆ ಹಾತುವರಿಯುತ್ತಿರುವರೋ, ಹಾಗೆಯೆ ಈ ಉಪಾಸಕನಿಗೂ ಧ್ಯಾನಬಲದಿಂದ ಆ ನಿತ್ಯಾನಂದಸ್ವರೂಪವು ಉಂಟಾಗಿ ಅವನು ಬ್ರಹ್ಮವೇ ಆಗಿ ಜನರಿಗೆ ತೋರುತ್ತಾನೆ; ಅವನು ಎಲ್ಲರಿಗೂ ಬೇಕಾದವನಾಗುತ್ತಾನೆ ; ಅವನನ್ನು ಎಲ್ಲರೂ ನೋಡಬೇಕೆಂದು, ಸೇವಿಸಿ ಕೃತಾರ್ಥರಾಗಬೇಕೆಂದು ಹಾತುವರಿಯುತ್ತಾರೆ.

———

## ೧೨. ಬ್ರಹ್ಮವಿದ್ಯೆಗೆ ಸಾಧನ

**ಉಪನಿಷದಂ ಭೋ ಬ್ರೂಹೀತ್ಯುಕ್ತಾ ತ ಉಪನಿಷದ್ ।**
**ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ ॥೭॥**

**ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ।**
**ವೇದಾಃ ಸರ್ವಾಂಗಾನಿ ಸತ್ಯಮಾಯತನಮ್ ॥೮॥**

**ಯೋ ವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನನ್ತೇ ।**
**ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ ॥೯॥**

**ಶಿಷ್ಯ :** 'ಪೂಜ್ಯರೆ, ಉಪನಿಷತ್ತನ್ನು ಹೇಳಬೇಕು.' **ಗುರು :** 'ನಿನಗೆ ಉಪನಿಷತ್ತನ್ನು ಹೇಳಿದ್ದಾಗಿದೆ. ಬ್ರಾಹ್ಮ ಉಪನಿಷತ್ತನ್ನೇ ನಿನಗೆ ಹೇಳಿಕೊಟ್ಟಿದ್ದೇವೆ. ಅದಕ್ಕೆ ತಪಸ್ಸು, ದಮ, ಕರ್ಮ– ಇವು ಪಾದಗಳು; ವೇದಗಳು ಎಲ್ಲಾ ಅಂಗಗಳು; ಸತ್ಯವು ವಾಸಸ್ಥಾನವು. ಯಾವನು ಈ ಉಪನಿಷತ್ತನ್ನು ಹೀಗೆ ಅರಿತುಕೊಳ್ಳುತ್ತಾನೋ ಅವನು ಪಾಪವನ್ನು ನೀಗಿಕೊಂಡು ಹೆಚ್ಚಿನ ಅನಂತವಾದ ಸ್ವರ್ಗಲೋಕದಲ್ಲಿ ನಿಲುಗಡೆಯನ್ನು ಹೊಂದುತ್ತಾನೆ.'

ಇದು ಒಟ್ಟು ಉಪನಿಷತ್ತಿನಲ್ಲಿ ಹೇಳಿರುವ ಬ್ರಹ್ಮವಿದ್ಯೆಯ ಉಪಸಂಹಾರವು. ಬ್ರಹ್ಮವಿದ್ಯೆಯು ನಿರುಪಾಧಿಕಬ್ರಹ್ಮವಿದ್ಯೆಯೆಂದೂ ಸೋಪಾಧಿಕಬ್ರಹ್ಮವಿದ್ಯೆಯೆಂದೂ ಎರಡು ಬಗೆಯಾಗಿರುತ್ತದೆ. ಬ್ರಹ್ಮವು ನಿಜವಾಗಿ ಯಾವ ಉಪಾಧಿಗಳ ಹಂಗೂ ಇಲ್ಲದೆ ತನ್ನಲ್ಲಿ ತಾನು ಸ್ವತಂತ್ರವಾಗಿದ್ದುಕೊಂಡಿರುತ್ತದೆ. ಚಕ್ಷುರಾದೀಂದ್ರಿಯಗಳು ವಿಷಯವನ್ನು ನೋಡುವಾಗಲೂ ಮನಸ್ಸು ಆಲೋಚನೆಮಾಡುವಾಗಲೂ ಬುದ್ಧಿಯು ನಿಶ್ಚಯಿಸುವಾಗಲೂ ಅವುಗಳಿಂದ ಉಂಟಾಗುವಂತೆ ತೋರಿಕೊಳ್ಳುವ ಅರಿವಿನ ತಿರುಳೇ ಅದು. ಈ ಅರಿವಿನ ನೆರವಿನಿಂದಲೇ ಮನೆ ಇಂದ್ರಿಯಾದಿಗಳು ಅರಿವುಳ್ಳವುಗಳಂತೆ ತೋರಿಕೊಂಡು ಹೊರಗಿನ ವಿಷಯಗಳನ್ನೂ ಬೆಳಗುತ್ತಿರುವವು. ಈ ದೃಷ್ಟಿಯಿಂದ ನೋಡಿದಾಗ ಇಡಿಯ ಜಗತ್ತೇ ಆ ಅರಿವಿನ ಆಧಾರದಿಂದ ಬೆಳಗುತ್ತಿದ್ದು ಅದರಲ್ಲಿಯೇ ಅಡಗುತ್ತಿರುವದು. ಆದ್ದರಿಂದ ಎಂದೆಂದಿಗೂ ನಿತ್ಯಶುದ್ಧವಾಗಿರುವ ಚಿದಾನಂದವಸ್ತುವೇ ಬ್ರಹ್ಮವು, ಅದೇ ನಮ್ಮಗಳ ಆತ್ಮನು ಎಂದು ಅರಿತುಕೊಳ್ಳುವದೇ ನಿರುಪಾಧಿಕಬ್ರಹ್ಮವಿದ್ಯೆಯು.

ಈ ಬ್ರಹ್ಮವನ್ನು ಯಾರು ನೇರಾಗಿ ಅರಿತುಕೊಳ್ಳಲಾರರೋ ಅವರು ಉಪಾಧಿಗಳ ಮೂಲಕವಾಗಿ ಬ್ರಹ್ಮವನ್ನು ಚಿಂತಿಸುತ್ತಾ ಕ್ರಮಕ್ರಮವಾಗಿ ಅದರ ಸ್ವರೂಪವನ್ನು ಅರಿತುಕೊಳ್ಳಬೇಕು. ಹೊರಗೆ ಮಿಂಚು ಮುಂತಾದವು ಹೊಳೆದು

ಹೊರುವದಕ್ಕೂ ಒಳಗೆ ಮನಸ್ಸು ಬಗೆಬಗೆಯ ವೃತ್ತಿಗಳಿಂದ ಅರಿಯುವದಕ್ಕೂ ಅದೇ ಆಧಾರವಾಗಿರುವದರಿಂದ ಆ ಉಪಾಧಿಗಳ ಮೂಲಕವಾಗಿಯೇ ಅದನ್ನು ಅರಿಯುವದಕ್ಕೆ ಯತ್ನಿಸಬೇಕು. ಅದು ಸರ್ವಪ್ರಾಣಿಗಳಿಗೂ, ನಮ್ಮೆಲ್ಲರಿಗೂ. ಅತ್ಯಂತಪ್ರಿಯವಾಗಿರುವದರಿಂದ ನಮ್ಮ ಪ್ರಿಯವಾದ ಆತ್ಮನು, 'ತದ್ವನ'ವೆಂಬ ಹೆಸರುಳ್ಳದ್ದು ಎಂದು ಅದನ್ನು ಉಪಾಸನೆಮಾಡಬೇಕು. ಇದು ಸೋಪಾಧಿಕ ಬ್ರಹ್ಮವಿದ್ಯೆಯು.

ಇದಿಷ್ಟೇ ಬ್ರಹ್ಮವಿದ್ಯೆಯ ಸರ್ವಸ್ವವು. ಈ ವಿದ್ಯೆಯೊಂದು ನಮಗೆ ದೊರಕಿದರೆ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವದಕ್ಕಾಗಲಿ ಅದರಿಂದಾಗುವ ಪರಮಪುರುಷಾರ್ಥವನ್ನು ಕಂಡುಕೊಳ್ಳುವದಕ್ಕಾಗಲಿ ಮತ್ತೆ ಏನನ್ನೂ ಮಾಡಬೇಕಾಗಿದ್ದಿರುವದಿಲ್ಲ. ಬ್ರಹ್ಮವಿದ್ಯೆಯು ಸ್ವತಂತ್ರವಾಗಿಯೇ ಪರಮಪುರುಷಾರ್ಥವನ್ನು ಕೊಡುವದು ; ಆದ್ದರಿಂದ ಅದೇ ಉಪನಿಷತ್ತು– ಎಂದರೆ ಬ್ರಹ್ಮದ ರಹಸ್ಯವನ್ನು ಅತ್ಯಂತ ಹತ್ತಿರಕ್ಕೆ ತಂದುಕೊಡುವ ಸಾಧನವು.

ಆದರೆ ಈ ವಿದ್ಯೆಯು ದೊರಕುವದು ಅಧಿಕಾರಿಗಳಿಗೆ ಮಾತ್ರ. ಬ್ರಹ್ಮವಿದ್ಯೆಗೆ ಯಾರು ಅಧಿಕಾರಿಗಳು ?– ಎಂದರೆ ಯಾರು ಸರಿಯಾದ ಸಾಧನಸಂಪತ್ತುಳ್ಳವರೋ ಅವರೇ ಅಧಿಕಾರಿಗಳು. ಯಾರು ತಪಸ್ಸು, ದಮ, ಕರ್ಮ– ಮುಂತಾದವುಗಳನ್ನು ಅಳವಡಿಸಿಕೊಂಡವರೋ ಅವರಿಗೆ ಮಾತ್ರ ಈ ವಿದ್ಯೆಯು ದಕ್ಕುತ್ತದೆ. ಯಾರು ಬ್ರಹ್ಮದ ಕಡೆಗೆ ತಿರುಗುವದೇ ಇಲ್ಲವೋ, ಯಾರು ಹೊರಕ್ಕೇ ತಿರುಗಿಕೊಂಡು ವಿಷಯಗಳಲ್ಲಿಯೇ ಮನಸ್ಸನ್ನಿರಿಸಿರುವರೋ, ಅಂಥವರಿಗೆ ಎಲ್ಲಕ್ಕೂ ಒಳಗಿರುವ ಬ್ರಹ್ಮಜ್ಞಾನವಾಗುವದು ಹೇಗೆ ?

ತಪಸ್ಸೆಂದರೆ ಶರೀರ, ಇಂದ್ರಿಯ, ಮನಸ್ಸು– ಇವುಗಳನ್ನು ಸಮಸ್ಥಿತಿಯಲ್ಲಿಟ್ಟುಕೊಳ್ಳುವದು. ಶರೀರವನ್ನು ಆಹಾರವಿಹಾರನಿದ್ರಾದಿಗಳಲ್ಲಿ ಮಿತವಾಗಿಟ್ಟುಕೊಳ್ಳುವದು, ರಾಗದ್ವೇಷವಿಲ್ಲದೆ ಅತ್ಯವಶ್ಯವಾದ ವಿಷಯಗಳನ್ನು ಸೇವಿಸುವದು, ಉತ್ತಮವಿಚಾರಗಳನ್ನೇ ಮನಸ್ಸಿನಲ್ಲಿ ತುಂಬಿಕೊಳ್ಳುವದು– ಈ ಮೂಲಕ ಮನಸ್ಸನ್ನು ಏಕಾಗ್ರವಾಗಿರಿಸಿಕೊಳ್ಳುವದು ತಪಸ್ಸು. ದಮವೆಂದರೆ ತಪಸ್ಸಿಗೆ ಅನುಕೂಲವಾಗುವಂತೆ ಇಂದ್ರಿಯಗಳನ್ನು ನಿಗ್ರಹಿಸುವದು ; ಕರ್ಮವೆಂದರೆ ಶರೀರಪ್ರಧಾನವಾದ ಮಿಕ್ಕ ಶಾಸ್ತ್ರೀಯವ್ಯಾಪಾರಗಳು. ಇವುಗಳೇ ಬ್ರಹ್ಮವಿದ್ಯೆಗೆ ಪಾದವು ; ಮನುಷ್ಯನು ಹೇಗೆ ಪಾದಗಳ ಮೇಲೆ ನೆಟ್ಟಗೆ ನಿಂತುಕೊಳ್ಳಲಾಪನೋ ಅದರಂತೆ ಬ್ರಹ್ಮವಿದ್ಯೆಯು ಇವುಗಳ ಆಧಾರದಿಂದ ನಿಲುಗಡೆಯನ್ನು ಹೊಂದುತ್ತದೆ. ವೇದಗಳೇ ಬ್ರಹ್ಮವಿದ್ಯೆಯ ಅಂಗಗಳು ಸಾಂಗೋಪಾಂಗವಾಗಿ ವೇದವನ್ನು ಅಧ್ಯಯನಮಾಡಿ ಅರ್ಥವನ್ನು ತಿಳಿದವನಿಗಲ್ಲವೆ, ತಪಸ್ಸು, ದಮ, ಕರ್ಮ-

ಇವುಗಳು ಶಕ್ಯವಾಗುವವು ? ಆದ್ದರಿಂದ ವೇದವು ಬ್ರಹ್ಮವಿದ್ಯೆಯ ಅವಯವ ಗಳಂತೆ ಇರುವದು. ಸತ್ಯವು ಬ್ರಹ್ಮವಿದ್ಯೆಯ ಆಶ್ರಯವು. ಯಾವನಿಗೆ ಸತ್ಯ ವನ್ನೇ ಅರಿಯಬೇಕೆಂಬ ಕುತೂಹಲವಿರುವದೋ ಅವನು ಸತ್ಯಪ್ರಿಯನಾಗಿರು ತ್ತಾನೆ, ಅನೃತವನ್ನು ಬಾಯಿಂದ ಆಡುವದಕ್ಕೆ ಕೂಡ ಹೋಗುವದಿಲ್ಲ. ಅಂಥ ಸತ್ಯವಂತನಲ್ಲಿಯೇ ಬ್ರಹ್ಮವಿದ್ಯೆಯು ನೆಲೆಯಾಗಿ ವಾಸಮಾಡುತ್ತದೆ.

ಹೀಗೆ ತಪಸ್ಸೇ ಮುಂತಾದ ಸಾಧನಗಳನ್ನು ಅಳವಡಿಸಿಕೊಂಡು ಚಿತ್ತಶುದ್ಧಿ ಯಿಂದ ಸದ್ಗುರುವಿನಲ್ಲಿ ಹೋಗಿ ಈ ಉಪನಿಷತ್ತಿನಲ್ಲಿ ಹೇಳಿರುವಂತೆ ಸತ್ಯಕ್ಕೂ ಸತ್ಯನಾಗಿ ಜ್ಞಾನಕ್ಕೂ ಜ್ಞಾನವಾಗಿ ಆನಂದಕ್ಕೂ ಆನಂದವಾಗಿರುವ ಬ್ರಹ್ಮ ವನ್ನು ಯಾವನು ಅರಿತುಕೊಳ್ಳುವನೋ ಅವನು ಸಕಲ ಪಾಪಗಳನ್ನೂ ತೊಲಗಿಸಿ ಕೊಳ್ಳುತ್ತಾನೆ. ಇಲ್ಲಿ ಪಾಪವೆಂದರೆ ಕೇವಲ ನಿಷಿದ್ಧಾಚರಣೆಯಿಂದ ಬರುವ ಪಾಪವು ಮಾತ್ರವೇ ಅಲ್ಲ ; ವಿಹಿತಕರ್ಮವನ್ನು ಮಾಡಿದ್ದರಿಂದ ಬರುವ ಪುಣ್ಯ ವನ್ನೂ ಸೇರಿಸಿಕೊಳ್ಳಬೇಕು. ಏಕೆಂದರೆ ಜ್ಞಾನಿಯ ದೃಷ್ಟಿಯಿಂದ ಅಧರ್ಮದಂತೆ ಧರ್ಮವೂ ಮೋಕ್ಷಕ್ಕೆ ಅಡ್ಡಿಯೇ ಆಗಿರುತ್ತದೆ. ತಾನು ಕರ್ತೃವೆಂಬ ಬುದ್ಧಿಯು ಕಾಮದಿಂದ ಬರುತ್ತದೆ, ಕಾಮವು ತನ್ನ ಆತ್ಮಸ್ವರೂಪವನ್ನರಿಯದ್ದರಿಂದ ಉಂಟಾಗಿರುತ್ತದೆ. ಆದ್ದರಿಂದ ಬ್ರಹ್ಮವನ್ನರಿತವನು ಪುಣ್ಯವನ್ನೂ ಪಾಪವನ್ನೂ ನಾಶಗೊಳಿಸುತ್ತಾನೆ–ಎಂದರೆ ಎರಡೂ ಕರ್ತೃತ್ವಬುದ್ಧಿಯಿಂದಾಗಿರುವದರಿಂದ ಅಕರ್ತ್ರಾತ್ಮಜ್ಞಾನದಿಂದ ಅವೆರಡನ್ನೂ ಮೀರುತ್ತಾನೆ–ಎಂದೇ ಅರ್ಥ. ಆಮೇಲೆ ಹೆಚ್ಚಿನ ಸ್ವರ್ಗವನ್ನು ಪಡೆದುಕೊಳ್ಳುತ್ತಾನೆ. ಸ್ವರ್ಗವೆಂದರೆ ಹೆಚ್ಚಿನ ಆನಂದವು. ಶಾಸ್ತ್ರೋಕ್ತವಾದ ಕರ್ಮವನ್ನು ಮಾಡಿದ್ದರಿಂದ ಸಿಕ್ಕುವ ಲೋಕಕ್ಕೂ ಸ್ವರ್ಗ ವೆಂದು ಹೆಸರು ; ಉಪಾಸನೆಯಿಂದ ಸಿಕ್ಕುವ ಬ್ರಹ್ಮಲೋಕಕ್ಕೂ ಸ್ವರ್ಗವೆಂಬ ಹೆಸರು ಶಾಸ್ತ್ರದಲ್ಲಿ ಕಂಡುಬರುತ್ತದೆ. ಆದರೆ ಜ್ಞಾನಿಯು ಪಡೆಯುವ ಸ್ವರ್ಗವು 'ಹೆಚ್ಚಿನದಾಗಿರುತ್ತದೆ, ಅನಂತವಾಗಿರುತ್ತದೆ' ಎಂದು ಶ್ರುತಿಯು ಹೇಳುವದರಿಂದ ಇದು ಅವೆರಡಕ್ಕೂ ಭಿನ್ನವಾಗಿರುವ ನಿತ್ಯಾನಂದಸ್ವರೂಪನಾದ ಬ್ರಹ್ಮವೇ ಆಗಿರು ತ್ತದೆ ಎಂದು ಹೇಳಿದಂತೆ ಆಯಿತು.

ಆದ್ದರಿಂದಲೇ ಸ್ಮೃತಿಯಲ್ಲಿ ಮೋಕ್ಷವನ್ನು ಹೀಗೆಂದು ವರ್ಣಿಸಿರುತ್ತದೆ :

ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ ।
ಶಾನ್ತಾಃ ಸಂನ್ಯಾಸಿನೋ ಯಾನ್ತಿ ತಸ್ಮೈ ಮೋಕ್ಷಾತ್ಮನೇ ನಮಃ ॥

— ಭೀಷ್ಮಸ್ತವರಾಜ

ಭಾವಾರ್ಥ : ಪಾಪವೂ ಪುಣ್ಯವೂ ನಾಶವಾಗಲು ಮತ್ತೆ ಹುಟ್ಟುವ ಅಂಜಿಕೆಯಿಲ್ಲದೆ ಶಾಂತರಾದ ಸಂನ್ಯಾಸಿಗಳು ಯಾವ ಪರಮಾತ್ಮನನ್ನು ಸೇರುವರೋ ಆ ಮೋಕ್ಷಾತ್ಮನಿಗೆ ನಮಸ್ಕಾರ.

ಈ ಶ್ಲೋಕದಲ್ಲಿ ಒಂದು ಸ್ವಾರಸ್ಯವಿದೆ. ಅದೇನೆಂದರೆ ಪರಮಾತ್ಮನು ಮೋಕ್ಷಾತ್ಮನು, ಎಂದರೆ ಮೋಕ್ಷದ ಸ್ವರೂಪವೇ. ನಮ್ಮ ಆತ್ಮನಿಗಿಂತ ಬೇರೆಯಾಗಿ ಮೋಕ್ಷವೆಂಬುದಿದ್ದರೆ ಅದನ್ನು ಯಾವದಾದರೊಂದು ಸಾಧನದಿಂದ ಸಂಪಾದಿಸಿಕೊಳ್ಳಬೇಕಾಗುವದು ; ಆದರೆ ಯಾವದು ಹೊಸದಾಗಿ ಪಡೆದುಕೊಳ್ಳಬೇಕಾದದ್ದೋ ಅದು ನಮ್ಮನ್ನು ಬಿಟ್ಟು ಅಗಲಲೂಬಹುದಾದ್ದರಿಂದ ಅದು ಅನಿತ್ಯವೂ ಆಗಬೇಕಾಗುವದು. ಆದರೆ ಮೋಕ್ಷವು ನಿತ್ಯವೆಂದು ಮೋಕ್ಷವಾದಿಗಳೆಲ್ಲರೂ ಹೇಳುತ್ತಾರಾದ್ದರಿಂದ ಅದು ನಮ್ಮ ಆತ್ಮನಿಗಿಂತ ಬೇರೆಯಾಗಿಲ್ಲವೆಂದು ಏರ್ಪಡುತ್ತದೆ. ಆದ್ದರಿಂದ ನಿತ್ಯಾನಂದಸ್ವರೂಪನಾದ ಪರಮಾತ್ಮನೇ ನಮ್ಮಗಳ ನಿಜವಾದ ಆತ್ಮನೆಂದು ಸಿದ್ಧವಾಯಿತು.

ನಮ್ಮ ಆತ್ಮನೇ ಆಗಿರುವ ಮೋಕ್ಷವನ್ನು ಪಡೆಯುವದಕ್ಕೆ ಅಡ್ಡಿಯೇನು ? —ಎಂದರೆ ನಾವು ಮಾಡುವ ಪುಣ್ಯಾಪುಣ್ಯಕರ್ಮಗಳು. ಮನುಷ್ಯನು ದೇಹಾದಿಗಳನ್ನೇ ತಾನೆಂದು ತಿಳಿದುಕೊಂಡು ಕರ್ಮಗಳನ್ನು ಮಾಡುತ್ತಾ ಪುಣ್ಯಪಾಪಗಳನ್ನು ಸಂಪಾದಿಸಿ ಅದರ ಫಲವಾಗಿ ಪುಣ್ಯಯೋನಿಗಳಲ್ಲಿಯೂ ಪಾಪಯೋನಿಗಳಲ್ಲಿಯೂ ಮತ್ತೆ ಮತ್ತೆ ಜನಿಸುತ್ತಿರುವನು. ಎಂಥ ಪುಣ್ಯವನ್ನು ಮಾಡಿ ಎಂಥ ಮೇಲಿನ ಲೋಕವನ್ನು ಸೇರಿದರೂ ಕರ್ಮದೋಷದಿಂದ ಮತ್ತೆ ಹುಟ್ಟಲೇಬೇಕು. ಮತ್ತೆ ಹುಟ್ಟುವ ಅಂಜಿಕೆಯಿಲ್ಲದ ಗತಿಯಾಗಬೇಕಾದರೆ ನಮ್ಮ ಆತ್ಮನೇ ಆಗಿರುವ ನಿತ್ಯಮುಕ್ತಸ್ವರೂಪದಲ್ಲಿ ನಾವು ನಿಲ್ಲಬೇಕು ; ಹಾಗೆ ನಿಲ್ಲುವದಕ್ಕೆ ಪುಣ್ಯಪಾಪಗಳ ಕೋಟಲೆಯು ಸಂಪೂರ್ಣವಾಗಿ ತೊಲಗಬೇಕು.

ಪುಣ್ಯಪಾಪಗಳ ಕೋಟಲೆಯು ಯಾವಾಗ ತೊಲಗುವದು ? ಎಂದರೆ ಯಾವಾಗ ನಮಗೆ ಕಾಮದ ಬಿಗಿತವು ತಪ್ಪುವದೋ ಆಗ. ಕಾಮದಿಂದಲೇ ನಾವು ಪುಣ್ಯಾಪುಣ್ಯಕರ್ಮಗಳನ್ನು ಮಾಡುವೆವು. ಜೀವನು ಮಾಡುವ ಯಾವದೊಂದು ಕರ್ಮವೂ ಕಾಮದ ಬಿಗಿತವಿಲ್ಲದೆ ಇರುವದಿಲ್ಲ. ಕಾಮಪಾಶಕ್ಕೆ ಕಟ್ಟುಬಿದ್ದೇ ನಾವು ಆಯಾ ಕರ್ಮಗಳನ್ನು ಮಾಡಿ ಆಯಾ ಜನ್ಮಗಳನು ಪಡೆಯುತ್ತಿರುವೆವು.

ಈಗ ಇನ್ನೊಂದು ಪ್ರಶ್ನೆಯು ಮುಂದಕ್ಕೆ ಬರುತ್ತದೆ. ನಮಗೆ ಕಾಮವು ಯಾವಾಗ ಇಲ್ಲವಾಗುವದು ? ಯಾವಾಗ ನಮಗೆ ತಪ್ಪುತಿಳಿವಳಿಕೆಯ ಮುಸುಕು ಇಲ್ಲವಾಗುವದೋ ಆಗ. ತಪ್ಪುತಿಳಿವಳಿಕೆಯಿಂದಲೇ ನಾವು ನಮಗಿಂತ ಹೊರಗಿನ ವಸ್ತುಗಳಲ್ಲಿ ಕಾಮವನ್ನು ಹುಟ್ಟಿಸಿಕೊಳ್ಳುತ್ತಿರುವೆವು. ನಮಗಿಂತ ಬೇರೆಯಾಗಿ ದ್ವೈತಪ್ರಪಂಚವೊಂದು ಇರುವದೆಂದೂ ಅದು ಶುಭಾಶುಭರೂಪವಾಗಿರುವದೆಂದೂ ನಾವು ಭಾವಿಸುತ್ತಲೇ ಇರುವದರಿಂದ ನಮ್ಮಲ್ಲಿ ಕಾಮವು ಹುಟ್ಟಿಕೊಳ್ಳುತ್ತದೆ. ಈ ಭಾವನೆಯು ಹೋದರೆ ಕಾಮವೂ ಹುಟ್ಟಡಗಿಹೋಗುತ್ತದೆ.

ಇನ್ನು ತಪ್ಪುತಿಳಿವಳಿಕೆಯು ಯಾವಾಗ ಹೋಗುತ್ತದೆ ?– ಎಂದು ಕೇಳಬೇಕಾಯಿತಷ್ಟೆ. ಇದಕ್ಕೆ ಉತ್ತರವು ಸುಲಭವಾಗಿರುತ್ತದೆ. ಸರಿಯಾದ ತಿಳಿವಳಿಕೆಯುಂಟಾದಕೂಡಲೆ ತಪ್ಪುತಿಳಿವಳಿಕೆಯು ಹಾರಿಹೋಗುತ್ತದೆ. ನಾವು ನಮ್ಮ ನಿತ್ಯಾನಂದಸ್ವರೂಪವಾದ ಶುದ್ಧಾತ್ಮಸ್ವರೂಪವನ್ನು ತಿಳಿದುಕೊಳ್ಳದೆ ಇರುವದರಿಂದಲೇ ಅವರಲ್ಲಿ ಈ ದ್ವೈತಪ್ರಪಂಚವೂ ಅದರ ಮಾಯಾವಿಲಾಸವೂ ನಮ್ಮನ್ನು ಮರುಳುಮಾಡುತ್ತಿರುತ್ತದೆ. ಆ ಪರಮಾನಂದಸ್ವರೂಪವನ್ನು ಕಂಡುಕೊಳ್ಳಬೇಕೆಂದು ಮಿಕ್ಕ ಕೆಲಸವನ್ನು ಬಿಟ್ಟು ಮನಸ್ಸನ್ನು ಬಿಗಿಹಿಡಿದು ಆತ್ಮನ ಅನ್ವೇಷಣೆಗೇ ಯಾವಾಗ ನಮ್ಮ ಜೀವನವೆಲ್ಲವನ್ನೂ ವಿನಿಯೋಗಿಸುವೆವೆಂದು ನಿಶ್ಚಯಮಾಡುವೆವೋ ಆಗಲೇ ನಾವು ಸನ್ಮಾರ್ಗವನ್ನು ತುಳಿದಂತೆ ಆಗುವದು. ಯಾವಾಗ ಸದ್ಗುರುವನ್ನು ಸೇರಿ ಶ್ರದ್ಧಾಭಕ್ತಿಪೂರ್ವಕವಾಗಿ ಅವರಲ್ಲಿ ತತ್ತ್ವವಿಚಾರವನ್ನು ಮಾಡಿ ಈ ಉಪನಿಷತ್ತಿನಲ್ಲಿ ಹೇಳಿರುವಂತೆ ಎಲ್ಲಕ್ಕೂ ಒಳಗಿರುವ ನಮ್ಮ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಸಚ್ಚಿದಾನಂದಸ್ವರೂಪನಾದ ಆತ್ಮನನ್ನು ಕಂಡುಕೊಳ್ಳುವೆವೋ ಆಗ ನಾವು ಕೃತಕೃತ್ಯರಾಗುವೆವು; ಇನ್ನುಮೇಲೆ ನಾವು ಮರಳಿ ಸಂಸಾರದಲ್ಲಿ ಬೀಳುವೆವೆಂಬ ಅಂಜಿಕೆಯು ಎಂದಿಗೂ ಇರುವದಿಲ್ಲ.

ಆಧ್ಯಾತ್ಮಪ್ರಕಾಶಮುದ್ರಣಾಲಯ, ಹೊಳೆನರಸೀಪುರ.